# ಡೊಂಕು ಬಾಲ

ನಾ. ಕಸ್ತೂರಿ

" ಕುಣಿದನಾ ರಾಮಯ್ಯ "

( ಪುಟ ೧೦೯ )





ಲಲಿತ ಸಾಹಿತ್ಯ ಮಾಲೆಯ ೯ನೆಯ ಕುಡಿ

# ಡೊಂಕು ಬಾಲ

(ವಿಡಂಬನ ಲೇಖನಗಳು)

ಶ್ರೀ. ನಾ. ಕಸ್ತೂರಿ



ಜುಲೈ ೧೯೪೪

ಬೆಲೆ: ೧—೮—೦

ಸಂಪಾದಕರು:
ಚುಳಕಿ ಗೋವಿಂದರಾಯರು

ಮಾರಾಟಗಾರರು:
ಮನೋಹರ ಗ್ರಂಥ ಭಾಂಡಾರ, ಧಾರವಾಡ
ಕನ್ನಡ ಪುಸ್ತಕಾಲಯ, ಬೆಳಗಾವಿ



ಲ. ಸಾ. ಮಾಲೆಯ ೧೦ನೆಯ ಕುಡಿ

# ಕಸ್ತೂರಿ

## ಸಣ್ಣ ಕತೆಗಳ ಸಂಗ್ರಹ

ಶ್ರೀಮತಿ 'ವಾಣಿ'



★



ಪ್ರಕಾಶಕರು:
ದ. ಬಾ. ಕುಲಕರ್ಣಿ
ಮನೋಹರ ಗ್ರಂಥ ಭಾಂಡಾರ
ಧಾರವಾಡ

ಮುದ್ರಕರು:
ಶಿ. ಬ. ಹರಿಹರ
ಕೋಂಟದಾರ್ಯ ಪ್ರೆಸ್, ಧಾರವಾಡ

# ನಿವೇದನೆ

★

ನಮ್ಮ ಲಲಿತ ಸಾಹಿತ್ಯ ಮಾಲೆಗೆ ಒಂದು ಕೃತಿಯನ್ನು ಕೊಡಬೇಕೆಂದು ನಾವು ಶ್ರೀಮಾನ್ ನಾ. ಕಸ್ತೂರಿ, ಎಂ. ಎ., ಬಿ. ಎಲ್. ಇವರನ್ನು ಕೇಳಿಕೊಂಡೆವು. ಅದರಂತೆ ಅವರು ನಮ್ಮ ಬಿನ್ನಹವನ್ನು ಮನ್ನಿಸಿ ತಮ್ಮ ಈ ಕೃತಿಯಾದ " ಡೊಂಕುಬಾಲ " ವನ್ನು ದಯಪಾಲಿಸಿದರು. ಅದಕ್ಕಾಗಿ ನಾವು ಅವರಿಗೆ ಕೃತಜ್ಞರಾಗಿದ್ದೇವೆ.

ಶ್ರೀಮಾನ್ ನಾ. ಕಸ್ತೂರಿ ಇವರ ಕೃತಿಗಳ ಪರಿಮಳವು ಕನ್ನಡ ಸಾಹಿತ್ಯದಲ್ಲಿ ಚಿರಪರಿಚಿತವಾಗಿದೆ. ಇಂಥವರ ಈ ಕೃತಿ ದೊರೆತುದುದಕ್ಕಾಗಿ ನಮ್ಮ ಮಾಲೆಯು ಹೆಮ್ಮೆಪಡುತ್ತದೆ.

ಪಡಿಯಚ್ಚನ್ನು ದಯಪಾಲಿಸಿದ ಮೈಸೂರ ವಿಶ್ವವಿದ್ಯಾಲಯ ಸಂಘದ ಅಧಿಕಾರಿಗಳಿಗೂ ಅದನ್ನು ಬರೆದವರಾದ ಶ್ರೀಮಾನ್ ಎಸ್. ಎನ್. ಸ್ವಾಮಿ ಅವರಿಗೂ ನಾವು ಉಪಕೃತರಾಗಿರುವೆವು.

ಸಂಪಾದಕರು

**ಲಲಿತ ಸಾಹಿತ್ಯ ಮಾಲೆ**

# ಗ್ರಂಥಕರ್ತ ಉವಾಚ



ಕತೆಗಾರ, ಪ್ರಜಾಮತ, ವಾಣಿ ಮುಂತಾದವುಗಳಲ್ಲೂ ಇತ್ತೀಚೆಗೆ "ಕೊರವಂಜಿ" ಯಲ್ಲೂ ಪ್ರಕಟವಾದ ಹಲವು ಹರಟೆಗಳನ್ನೂ ಹೊಸದಾಗಿ ಬರೆದ ಹತ್ತು ಹನ್ನೆರಡು ಹರಟೆಗಳನ್ನೂ "ಡೊಂಕು" ದಾರದಿಂದ ಬಿಗಿದಿದೇನೆ. ನನ್ನ ಬರೆವಣಿಗೆಗಳನ್ನೆಲ್ಲ ನಾನು ಓದಿದ ಗ್ರಂಥಗಳಿಂದಲೂ ನಾನು ಕಂಡ ಜನಜೀವನದಿಂದಲೂ ಅಳವಡಿಸಿಕೊಂಡಿದೇನೆ. ಈ ಗ್ರಂಥವನ್ನು ಲಲಿತವೆಂದು ಪ್ರಕಾಶಕರೇ ಒಪ್ಪಿದಾರೆ; ಆದರೆ ಅದು ಸುಲಲಿತವಾಗಬೇಕಾದರೆ ನಾನು ಉಪಯೋಗಿಸಿರುವ ಸಾಲೋಗರ, ವೇದಸಾರವಿಂದ, ಪ್ರಾಚೀನಾರೀತಿ, ಗುಳಸ್ಯ ಕಂಠಸ್ಯ, ಕಸ್ಯಾಕುಬ್ಜೆ, ಕೀಥಾವಿ ಮೊದಲಾದ ಪದಗಳನ್ನು ಸಹಾನುಭೂತಿಯಿಂದ ಮೆಲ್ಲಬೇಕು. ಅಲ್ಲದೆ ೨೩ನೆಯ ಪುಟದಲ್ಲಿ ಸಿತಾಕ ಎಂಬುದನ್ನು ಸಿತಾರ ಎಂದು ತಿದ್ದಿಕೊಳ್ಳಬೇಕು; ಅಂತೆಯೇ, ಉಳಿದ ಕೆಲವು ಕಡೆಗಳಲ್ಲೂ ಅಚ್ಚಿನ ತಪ್ಪುಗಳನ್ನು ತಟಾಯಿಸಿಕೊಂಡು ಓದಬೇಕು. ಹೊದಿಕೆಯ ಮೇಲಿನ ಚಿತ್ರದ ಪಡಿಯಚ್ಚನ್ನು ಕೃಪೆಮಾಡಿ ಒದಗಿಸಿದವರು ಮೈಸೂರು ವಿಶ್ವವಿದ್ಯಾಲಯ ಸಂಘದ ಅಧಿಕಾರಿಗಳು. ಅದನ್ನು ಬರೆದವರು ಶ್ರೀಮಾನ್ ಎಸ್. ಎನ್. ಸ್ವಾಮಿ ಅವರು. ಅವರಿಗೆ ನನ್ನ ವಂದನೆಗಳು. ಈ ಪುಸ್ತಕವನ್ನು ತಂದು ಅದನ್ನು ಓದಲು ನಿಶ್ಚಯಿಸಿರುವ ತಮಗೆ ನನ್ನ ನಮಸ್ಕಾರಗಳು. ಓದಿ ಮುಗಿದ ಮೇಲೂ ನಮ್ಮ ನಿಮ್ಮಲ್ಲಿ ಇದೇ ವಿಶ್ವಾಸವಿರಲಿ ! ಇನ್ನೇನೂ ವಿಶೇಷವಿಲ್ಲ.

ದುರ್ಗೀ ಗುಡಿ
ಶಿವಮೊಗ್ಗ

ನಾ. ಕಸ್ತೂರಿ

ಅಡ್ಡ ಹೆಸರನ್ನೂ ಹಣೆಯಲ್ಲಿ ಅಂಟಿಸಿಕೊಳ್ಳದೆ, ನರವಿಲ್ಲದ ನಾರಾಯಣನಾಗಿ ಮುನಿಸಿಪಲ್ ಆಫೀಸ್ ಮುಂಧಿನ ಬೋರ್ಡಿನಲ್ಲಿ "ಜನನ"ದಿಂದ "ಮರಣ"ದ ವರೆಗೂ ಘಟ ಸಾಗಿಸಬಹುದು. ತೊಂಬತ್ತರಲ್ಲೊಂಬತ್ತಾಗಿ, ಒಲಿ ಮರಿ ಬೆಕ್ಕಾಗಿ, ಬದುಕನ್ನು ನೂಕಬಹುದು.

ಆದರೆ, ನನಗಿಂತ ಒಂದೆರಡು ಗೇಣು ಕಡಮೆ ಬೆಳೆದರೆ ಸರಿ, ಬಂತು ಗ್ರಹಚಾರ! ಅವನ ಪಾಡು ಅತ್ಯಂತ ರೋದನೀಯ. ಉಳಿದವರೆಲ್ಲ ಅವನನ್ನು ತುಳಿದಿರಿಸಿ ಅವನ ತಲೆಯ ಮೇಲೆಯೇ ತೇಲಾಡುತ್ತಿರುವಾಗ ಆ ನೆರಳಿನ ನುಗ್ಗಾಟದಲ್ಲಿ ಅವನ ಬಾಳಿಗೆ ಬೆಳಕೆಲ್ಲಿಂದ ಬರಬೇಕು? ತುದಿಗಾಲಲ್ಲೇ ತಾಂಡವವಾಡುತ್ತಾ ಅವನು ಇತರರ ಮಾತುಗಳನ್ನು ಕಿವಿ ಎತ್ತಿ ಆಲಿಸಬೇಕು; ಮುಖ ನೀಡಿ ಮಾತನಾಡಬೇಕು. ಸದಾ ಆಕಾಶದ ಕಡೆ ಕತ್ತೆತ್ತಿ ಹಲ್ಲು ಕಿರಿಯ ಬೇಕು. ಅವನು ಭಾರಿ ಜನಸಂದಣಿಯ ನಡುವೆ ಸಿಕ್ಕಿಬಿದ್ದರೆ, ಸರಿ! ಸಾವಿರ ಕಾಲು ಮಂಟಪದ ಸ್ತಂಭಾರಣ್ಯದಲ್ಲಿ ತೊಳಲುವ ಹಸುಗೂಸಿನಂತೆ ಅಸಹಾಯ ನಾಗಿ ಗೋಳಿಡಬೇಕಾಗುತ್ತದೆ. ತನ್ನ ಕಡೆಗೆ ಯಾರೂ ತಗ್ಗುವುದಿಲ್ಲವೆಂದು ಮನಗಂಡಾಗ ಅವನ ಕೋಪ ಕೆರಳುತ್ತದೆ. ಇತರರ ಲಕ್ಷ್ಯವನ್ನು ತನ್ನ ಕಡೆಗೆ ಸೆಳೆದುಕೊಳ್ಳಲು ಕುಳ್ಳರು ಯಾವುದಾದರೂ ಚೇಷ್ಟೆಯನ್ನು ಮಾಡು ತ್ತಲೇ ಇರುತ್ತಾರೆ. ಅಗಸ್ತ್ಯರನ್ನು ತೆಗಿದುಕೊಳ್ಳಿ. ನಾವು ತೆಗಿದು ನಮ್ಮ ಅಂಗೈ ಮೇಲಿರಿಸಿಕೊಳ್ಳುವಷ್ಟು ಕುಳ್ಳರಾಗಿದ್ದರು ಅವರು. ಆದರೂ, ದಾಹವಿಲ್ಲ ದಿದ್ದಾಗ, ಮುಂದೆ ಒದಗಬಹುದಾದ ದಾಹದ ಚಿಂತೆಯನ್ನೂ ಬದಿಗಿರಿಸಿ, ಅಷ್ಟೊಂದು ಉಪ್ಪುನೀರನ್ನೂ ಕುಡಿದೇಬಿಟ್ಟರಲ್ಲಾ! ಜೊತೆಗೆ ವಾತಾಪಿಯನ್ನು ಜೀರ್ಣ ಹಾಕಿದರು ಜಠರಮೋಳಕ್ಕೆ ಉಪ್ಪಿನಕಾಯಿಗಾಗಿ! ನೆಪೋಲಿಯನ್ ಎಂಬುವನು ಮತ್ತೊಬ್ಬ ಪ್ರಖ್ಯಾತ ಕುಳ್ಳ. ಆತ ನಕ್ಷತ್ರಗಳನ್ನೆಣಿಸುತ್ತಾ ನಶ್ಯ ಏರಿಸುತ್ತಾ ನಾಲ್ಕಾರು ಸಿಂಹಾಸನಗಳನ್ನು ಉರುಳಿಸಿದ, ತನ್ನನು ಸಹಿತವಾಗಿ! ಕುಳ್ಳರ ಸ್ವಭಾವವೇ ಕುಚೇಷ್ಟೆ. ಬಲಿಚಕ್ರವರ್ತಿಯನ್ನೇ ಬಲಿಹಾಕಿದ ದೇವರು ವಾಮನನಾಗಿಯೇ ಅವತಾರ ಮಾಡಿದ. ಬೇಡುವಾಗ ಕುಳ್ಳ; ಕಾಡುವಾಗ ಕಳ್ಳ. ಒಂದು ಹೆಜ್ಜೆಗೆ ಅವಕಾಶ ಕೊಟ್ಟರೆ ಮೂರನೆಯದು ತಲೆಯ ಮೇಲೆಯೇ!

ಕುಳ್ಳರನ್ನು ಕಂಡರೆ, (ಅವರನ್ನು ಕಾಣುವುದೇ ಬಹು ಕಷ್ಟದ ಕೆಲಸ)

ಕನಿಕರ ತುಂಬಿದ ಕೀಟಲೆಗೆ ಪ್ರತಿ ಒಬ್ಬರೂ ತೊಡಗುತ್ತಾರೆ. ಅವರು ಎಷ್ಟು ಬೆಳೆದವರಾದರೂ ನಮ್ಮ ಕಣ್ಣಿಗೆ ಮಕ್ಕಳೇ! ಇಂಥ ಸಲಿಗೆಯ ಲೇಪಡಿಗೆ ಕುಳ್ಳರು ಸದಾ ಸಿದ್ಧರಿರಬೇಕಾಗುತ್ತದೆ. ಮನೆಯಾಕೆಯಂತೂ ಅವರ ನಶ್ಯದ ಡಬ್ಬಿ, ಇಸ್ಪೀಟ್ ಕಟ್ಟು, ಪಗಡೆ ಕಾಯಿ, ಭಗವದ್ಗೀತೆ, ಕನ್ನಡಕ, ಜಪಸರ ಇವುಗಳನ್ನು ಎಟುಕಲಾರದ ಸ್ಥಳಗಳಿಗೆ ವರ್ಗಾಯಿಸಿ ಪೇಚಾಡಿಸುತ್ತಾಳೆ. ಅವರು ಯಾವ ಜಾತ್ರೆಗೂ ತೇರಿಗೂ ಉತ್ಸವಕ್ಕೂ ಹೋಗಿ ಪ್ರಯೋಜನವಿಲ್ಲ. ತೋಳಿನ ಮೇಲೆ ಎತ್ತಿ ಕೂರಿಸಿ ಅವರಿಗೆ ಎಲ್ಲವನ್ನೂ ತೋರಿಸುವವರು ಯಾರು? ಮುಂದಿನ ಸಾಲಿನವರು " ಜೈ " ಅಂದಾಗ ಅವರೂ " ಜೈ " ಎಂದು ಧ್ವನಿ ಗೂಡಿಸಿ ಹಿಂತಿರುಗುತ್ತಾರೆ, ಅಷ್ಟೆ. ಗುಂಪಿನ ಗಂಟಲು ಕಾಯುತ್ತಾ ನಿಂದು, ಅವರೊಂದಿಗೆ ಗೋವಿಂದಾ ಎಂದು ಹೇಳುವುದೇ ಅವರ ಸೇವಾರ್ಥ.

ನನಗಿಂತ ಒಂದೆರಡು ಗೇಣು ಎತ್ತರವಾಗಿ ಬೆಳೆದರೂ ಗೋಳು ತಪ್ಪಿದ್ದಲ್ಲ. ಸೂತಿಕಾಗೃಹದಿಂದ ಸುಡುಗಾಡಿನವರೆಗೂ ಕಣ್ಣೆಂಜಲು ಸಹಿತ ಕಾದಿರುತ್ತಾರೆ ಮಹೀಜನಗಳು. ಬುದ್ಧಿ ಬರುವ ಮೊದಲೆ ತಲೆ ತಾಕುವುದಕ್ಕೆ ಪ್ರಾರಂಭವಾಗುತ್ತದೆ. ತೊಟ್ಟಿಲಲ್ಲಿ ಮಲಗಿಸುವಾಗ ಅದರ ಚೌಕಟ್ಟು ತಲೆ ಬುರುಡೆಗೆ ಬಡಿಯುತ್ತದೆ. ಕೋಣೆಯಿಂದ ಕೋಣೆಗೆ ಸಾಗಿಸುವಾಗ ಬಾಗಿಲ ವಾಡಗಳು ಪಾದಮಸ್ತಕಗಳೆರಡಕ್ಕೂ ಒಮ್ಮೆಲೆ ಬಡಿಯುತ್ತವೆ. ತಂದೆಯ ಮೇಜಿನ ಕೆಳಗೆ ಅಂಬೆಕಾಲಿಕ್ಕಲು ಕಲಿತರೆ ತಲೆಬಡಿತವೇ ಲಾಭ. ಹೀಗೆ ಚಿಕ್ಕಂದಿನಲ್ಲೇ ಚಕ್ಕಂದವಾಡುವಾಗಲೇ, ಮೊದಲಾದ ಶಿಕ್ಷೆ ಸ್ನಾನದ ಮನೆ, ಬಸ್ಸು, ರೈಲು, ದೇವಸ್ಥಾನ, ಕಾರಾಗೃಹ ಮುಂತಾದ ಕಡೆಗಳಿಗೂ ಹರಡಿ ಬರಬರುತ್ತಾ ತಲೆ ಬಟ್ಟಾಗಿ ಪೆಟ್ಟುಗಳ ಮೊತ್ತದಿಂದ ಮೆದುಳೇ ಕದಡಿಬಿಡುತ್ತದೆ. ಅಂತು, ತಲೆಯ ಮೇಲೆ ಏಟುಗಳ ಮೂಟೆಯನ್ನು ಹೊತ್ತು ತಿರುಗುವುದೇ ಎತ್ತಮದವರ ಶಿರೋಲಿಖಿತ. ಅವರು ರೆಡಿಮೇಡ್ ಬಟ್ಟೆಬರೆಗಳನ್ನು ಧರಿಸುವ ಹಾಗಿಲ್ಲ. ಏ. ಆರ್. ಪಿ. ಗುಳಿಗಳಲ್ಲಿ ಮರೆಯಾಗಿ ಕೂರುವಂತಿಲ್ಲ. ಬೈಸಿಕಲ್ಲಿನ ಸೀಠವನ್ನು ಎಷ್ಟು ಮೇಲಾಗಿಸಿದರೂ ತುಳಿತಕ್ಕೆ ಕಾಲು ಹಚ್ಚಿದ ಕೂಡಲೇ ಮಂಡಿಗಳೆರಡೂ ಗಲ್ಲವನ್ನು ಬಡಿಯುವುವು. ಸುಡುಸುಡು ಚಹ ಕುಡಿದರೂ ಹೊಟ್ಟೆ ಸೇರುವ ಹೊತ್ತಿಗೆ ತಂಪಾದ ಪಾನೀಯವೆನಿಸುತ್ತದೆ. ನಿನ್ನೆ ಸಂಜೆಯ ತೇಗು ಇವತ್ತು ಹೊರಹೊಮ್ಮುತ್ತದೆ. ಅವರು ಕಳ್ಳತನ ಕಲಿತು,

ಕನ್ನ ಕೊರೆದರೆ, ಇಡೀ ಕಳೇಬರವನ್ನು ಗೃಹಪ್ರವೇಶ ಮಾಡಿಸುವುದರೊಳಗೆ ಬೆಳ್ಳಂಬೆಳಗಾಗುತ್ತದೆ. ಪೆನಷನ್ ಪಡೆದ ಅನಂತರವೂ ಕೂಡ ಅವರ ಸಂಗಡ ಯಾರೂ ವಾಕಿಂಗ್ ಹೊರಡುವಂತಿಲ್ಲ. ಮನೆ ಮಂಚದಲ್ಲಲ್ಲದೆ ಮಲಗುವಂತಿಲ್ಲ. ನಂಟರಿಷ್ಟರಲ್ಲಾಗಲಿ, ಆಸ್ಪತ್ರೆಗಳಲ್ಲಾಗಲಿ ಪರ್ಯಂಕಗಳಲ್ಲಿ ಪವಡಿಸಿದಾಗ, ಸೊಂಟದಿಂದೀಚಿನ ಕಾಲುಭಾಗ (ಅರ್ಧ ಭಾಗವೆಂದು ಹೇಳಿದರೂ ಹೇಳಬಹುದು, ಇರ್ಕಾಲಿನ ಪ್ರಾಣಿಗಳ ವಿಷಯ ಬಂದಾಗ) ಕೆಳಗೆ ಜೋತು ಬಿದ್ದಿರುತ್ತದೆ. ಅಷ್ಟಾವಕ್ರ ಮಹರ್ಷಿಗಳಂತೆ ಅವರು ತಮ್ಮ ದೇಹವನ್ನು ಮುದುರಿಸಿ ಮಲಗಬೇಕಾಗುತ್ತದೆ. ಬಸ್ಸುಗಳಲ್ಲಿ ಸಂಚಾರ ಮಾಡುವಾಗ ಅವರಿಗೆ ಮಂಡಿಗಳೇ ತಲೆಗಂಬಗಳು ! ಯಾರಿಗೂ ತಿಳಿಯದೆ ಅವರು ಪಂಚಾಂಗಕ್ಕೆ ಸೇರಿ ಗಸ್ತು ತಿರುಗುವಂತಿಲ್ಲ. ಅವರ ಗೆಳೆಯರಿಗಂತೂ ಅವರು ಆನಂದದಾಯಕ; ಗೇಲಿಯ ಗಣಿ; ಚಟಾಕಿಗಳ ಗುರಿ. ಸಾಲುಮರ ಮುರಿದೀತು, ಆಕಾಶ ಹರಿದೀತು, ನಕ್ಷತ್ರಗಳುದುರೀತು, ಕಾಮನಬಿಲ್ಲು ಕಳಚೀತು, ಪಂಚಮಿಯ ಚಂದ್ರ ಚುಚ್ಚೀತು, ವಿಮಾನ ಕಿವಿಯೊಳಕ್ಕೆ ಹೋದೀತು, ಎಂದು ಅವರು ಮೇಲು ಮೇಲಕ್ಕೆ ಕೂಗುತ್ತಿರುತ್ತಾರೆ. "ನಿನಗೇನಪ್ಪ ! ಸದಾ ಪರಲೋಕಾವಲೋಕನ, ತಾರೆಯರ ಸಹವಾಸ, ಒಂದೆ ಕೂಗಳತೆ" ಎಂದು ಮುಂತಾಗಿ ಮೇಲುದನಿಯಲ್ಲಿ ಹೀಯಾಳಿಸುತ್ತಾರೆ. ಅಂತು ಎತ್ತರದವರು ವನಸುಮಗಳಂತೆ ತಮ್ಮ ಜೀವನವನ್ನು ವಿಕಸಿಸುವಂತಿಲ್ಲ. ಅವರು ನಿಜಕ್ಕೂ ಗಗನ ಕುಸುಮಗಳೇ ! ನನ್ನ ಸಹಪಾಠಿಯಾಗಿದ್ದ ಒಬ್ಬ ಗಗನಕುಸುಮವನ್ನು ನಮ್ಮ ಮಾಸ್ತರ್‌ರವರು "ಲೋ ! ನೀನು ನೀರಲ್ಲಿ ಮುಳುಗಿ ಸಾಯುವುದಿಲ್ಲ. ಎಂತಹ ಮಾಲಿಂಗಿಯೂ ಕೂಡ ನಿನಗೆ ಮೊಳಕಾಲಿನಷ್ಟೇ ಆಳ !........ನೀನು ಹಾವು ಕಚ್ಚಿ ಸಾಯುವುದಿಲ್ಲ. ಕಾಲಿಂದ ಹೃದಯದ ವರೆಗೂ ರಕ್ತನಾಳಗಳ ಮೂಲಕ ಅದರ ವಿಷ ಹರಿದು ಬರುವುದರೊಳಗೆ ನಿನ್ನ ಪುರುಷಾಯುಸ್ಸೇ ಪೂರ್ಣವಾಗಿರುತ್ತದೆ......ಇನ್ನು ನೀನು ನೇಣು ಹಾಕಿಕೊಂಡು ಪ್ರಾಣಬಿಡುವ ಹಾಗಿಲ್ಲ. ಎಷ್ಟು ಎತ್ತರದಲ್ಲಿ ನೇತಾಡಿದರೂ ನಿನ್ನ ಕಾಲು ನೆಲಕ್ಕೆ ತಗಲುತ್ತದೆ... ನಿನಗೆ, ಅಂದರೆ, ನನಗೆ ಸಿಡಿಲೇ ಗತಿ." ಎಂದು ಆಶೀರ್ವಾದ ಮಾಡುತ್ತಿದ್ದರು. ಗುರುಗಳ ಮಾತು ಸುಳ್ಳಾಗುತ್ತದೆಯೇ ? ಕಾಲಮಹಿಮೆ ! ಮೊನ್ನೆ ಅವನ ತಲೆಗೆ ಇಲೆಕ್ಟ್ರಿಕ್ ತಂತಿ ತಗುಲಿತು.

ಕಾಲಸ್ಥಿತಿ ಎಲ್ಲರಿಗೂ ಒಂದೇ ಸಮವಾಗಿದ್ದರೆ ಚಂದ, ಅಂತ ಒಮ್ಮೊಮ್ಮೆ ಅನ್ನಿಸುತ್ತದೆ. ನಮಗೆ ಕಾಲಭೈರವರೂ ಬೇಡ, ಕನ್ಯಾಕುಬ್ಜಿಯರೂ ಬೇಡ, ಅನ್ನಿಸುತ್ತದೆ. ಆದರೆ, ಕಾಲಗತಿಯನ್ನರಿತವರು ಯಾರು ?

ಮುಖದ ಮೇಲಿನ ಡೊಂಕು ೨

# ತುದಿಮೂಗು



ಮೂಗಿನ ತುದಿಯಲ್ಲೇ ಕೋಪ ಕುಳಿತಿರುವ ದೂರ್ವಾಸರು ಯಾರೂ ಈ ಲೇಖನವನ್ನು ಓದಕೂಡದೆಂದು ಮೊದಲೇ ತಡೆದುಬಿಡುತ್ತೇನೆ. ಏಕೆಂದರೆ, ಹೊರಮೂಗಿಂದ ಮಾನವನಿಗೆ ಏನು ಪ್ರಯೋಜನ, ಎಂಬುದೇ ನನ್ನ ಮೊದಲನೆಯ ಪ್ರಶ್ನೆ ! ಈ ವಿಷಯದಲ್ಲಿ ಆನೆ ನಮಗಿಂತ ಎಷ್ಟೋ ವಾಸಿ. ಆನೆ ತನ್ನ ಮೂಗಿನಿಂದಲೇ ನೀರು ಕುಡಿಯುತ್ತದೆ; ಸ್ನಾನ ಮಾಡುತ್ತದೆ, ಮೈ ಉಜ್ಜಿಕೊಳ್ಳುತ್ತದೆ. ತನ್ನನ್ನು ನೋಯಿಸಿದವರ ಮೇಲೆ ಸೇಡು ತೀರಿಸಿಕೊಳ್ಳುತ್ತದೆ; ಬೀದಿಯಲ್ಲಿ ಉರುಳಾಡುತ್ತಿರುವ ತನ್ನ ಮಾವುತನ ಮಗನನ್ನು ಬೆನ್ನ ಮೇಲೆ ಕೂರಿಸಿಕೊಳ್ಳುತ್ತದೆ. ಅಲ್ಲಲ್ಲಿ ಬಿದ್ದಿರುವ ಸೂಜಿಗಳನ್ನೂ ಸಹ ಅದು ತನ್ನ ಮೂಗಿನಿಂದ ಹುಡುಕಿ ತೆಗೆಯಬಲ್ಲುದು. ಶೀಘಾವಿಗಳಾದ ನಮ್ಮ ಮಾತು ಹಾಗಿರಲಿ, ಮೇಧಾವಿಗಳಾದ ಪ್ರಾಚೀನ ಆರ್ಯರೂ ಕೂಡ ಅದರ ಮೂಗನ್ನು ಕೈಯೆಂದೇ ತಿಳಿದು ಮೋಸಹೋಗಿ ಅದಕ್ಕೆ ಹಸ್ತಿ ಎಂದು ಹೆಸರಿಟ್ಟರು ! ಅಂತಹ ಹೆಸರಿಗಾಗಿ ಆನೆಯೂ ಕೂಡ ಅವರಿಗೆ ಮೂಗೆತ್ತಿ ಮರ್ಯಾದೆ ಮಾಡುತ್ತಿದೆ.

ಆನೆಗೂ ಮೂಗಿದೆ, ನಮಗೂ ಇದೆ. ಆದರೆ, ಅದಕ್ಕೂ ಇದಕ್ಕೂ ಕರಿನರಾಂತರ. ಬೇರೆ ಯಾವ ಪ್ರಾಣಿಗೂ ಮುಖದ ಮೇಲೆ ಬಾಯಮಟ್ಟಕ್ಕಿಂತ

ಎತ್ತರವಾಗಿ ಎದ್ದುನಿಲ್ಲುವ ಮೂಗೇ ಇಲ್ಲ. ವಸ್ತುತಃ ಮೂಗು ಘ್ರಾಣೇಂದ್ರಿಯ, ಅಲ್ಲದೆ, ಉಸಿರೆಳೆಯುವ ಉಪಕರಣ. ಗಾಳಿಯಲ್ಲಿ ಸೇರಿಕೊಂಡಿರುವ ಧೂಳೇ ವಾಸನೆಯ ಪ್ರೇರಕ. ಆದರೆ, ನಾಗರೀಕತೆ ಬೆಳೆದ ಹಾಗೆಲ್ಲಾ ಗಾಳಿಯಲ್ಲಿ ಗೋಧೂಳು ಮಾತ್ರವೇ ಅಲ್ಲದೆ ಇತರ ವಿಧದ ಧೂಳೂ ಸೇರಿ ಬರಬರುತ್ತಾ ಮಾನವನ ನಾಸಿಕಗೆ ನಾತವೇ ಹತ್ತದಂತಾಗಿದೆ. ಆದ್ದರಿಂದಲೇ ಒಬ್ಬ ಪಾಶ್ಚಾತ್ಯ ಕವಿ "ಗುಲಾಬಿ ಹೂವಿನ ಕಂಪನು ಹೀರಲು ಸಾಲದು ಒಂದೇ ಮೂಗೆನಗೆ" ಎಂದು ಸಿಂಬಳ ಸುರಿಸಿರುವನು. ಮತ್ತೆ ಕೆಲವರು ತಮ್ಮ ಮೂಗಿನ ಕೊರತೆಯನ್ನು ಮನಗಾಣದೆ ಪರಿಮಳವನ್ನೇ ದೂರುವರು. ಮೂಗು ಡೊಂಕಾದರೆ ಪರಿಮಳ ಡೊಂಕೆ, ಎಂದು ಅವರು ವಿಚಾರ ಮಾಡಿಲ್ಲವೆಂದು ತೋರುತ್ತದೆ. ಹೀಗೆ ಘ್ರಾಣಶಕ್ತಿ ಇಳಿದುಹೋಗಿರುವುದು ಒಂದು ರೀತಿಯಲ್ಲಿ ನಮಗೆ ಅನುಕೂಲವೇ. ಏಕೆಂದರೆ, ಚುರುಕಾದ ಮೂಗಿನವರು ಯಾರೂ ಈಗಿನ ಹಳ್ಳಿಗಳಲ್ಲೂ ಪಟ್ಟಣಗಳಲ್ಲೂ ಹೆಚ್ಚು ಹೊತ್ತು ನೆಮ್ಮದಿಯಿಂದ ವಾಸಿಸಲಾರರು. ಪರಿಮಳದ ಇರುವಿಕೆಯು ಗೋಚರವಾಗಬೇಕಾದರೆ, ಒಳ್ಳೆಯ ಮೂಗು ಮಾತ್ರ ಇದ್ದರೆ ಸಾಲದೆಂದು ಶರೀರ ಶಾಸ್ತ್ರಜ್ಞರು ಹೇಳುತ್ತಾರೆ. 'ಕತ್ತೆ ಬಲ್ಲುದೇ ಹೊತ್ತ ಕತ್ತುರಿಯ ಪರಿಮಳವ?' ಎಂಬ ಪ್ರಶ್ನೆಗೆ 'ಇಲ್ಲ' ಎಂದು ಉತ್ತರ ಹೇಳುವುದೇ ಮಾನವ ಧರ್ಮ. ಕತ್ತೆಗೆ ಮೂಗಿದ್ದರೂ ಮಿದುಳಿಲ್ಲವೆಂಬುದು ಸರ್ವ ಜನ ವಿದಿತವಾದ ಸಂಗತಿ. ಆದರೆ, ಮನುಷ್ಯನಿಗೆ ಮೂಗೂ ಇದೆ, ಮೂಗಿನ ಮೇಲುಭಾಗದಲ್ಲಿ ಮಿದುಳೂ ಇದೆ. ಕೆಲವು ವೇಳೆ ಮಿದುಳು ಕದಡಿ "ಕುಸುಮದೊಳು ಗಂಧವೋ, ಗಂಧದೊಳು ಕುಸುಮವೋ, ಗಂಧ ಕುಸುಮಗಳೆರಡೂ ನಾಸಿಕದೊಳಗೋ?" ಎಂಬ ಚರ್ಚೆಗೆ ಹೊರಟು ಮೂಗು ಮುರಿದುಕೊಳ್ಳುತ್ತಾನೆ. ಇರಲಿ! ಉಸಿರಾಡುವುದಕ್ಕೂ ವಾಸನೆ ಹಿಡಿಯುವುದಕ್ಕೂ ನಮಗೆ ಈಗಿನ ಹೊರಮೂಗು ಬೇಕಾಗಿಯೇ ಇಲ್ಲ. ಲಕ್ಷ್ಮಣ ತನ್ನ ಮೂಗು ಕೊಯ್ದ ಮೇಲೂ ಶೂರ್ಪಣಖಿ ಚಿರಕಾಲ ಬಾಳಿದಳು. ಮೂಗುಬೊಟ್ಟು, ಬುಲಾಕು ಮುಂತಾದ ಒಡವೆಗಳಿಗವಕಾಶವಿಲ್ಲದೆ ಹೋಯಿತು, ಅಷ್ಟೆ! ಅಲ್ಲದೆ ಚಾಳೀಸ ಬಂದಾಗ ಕನ್ನಡಕ ಧರಿಸಲು ತೊಂದರೆಯಾಯಿತೋ ಏನೋ? ಆದರೂ ಆಕೆಯ ಸನ್ನಿಧಿಯಲ್ಲಿ ಊದು

ಬತ್ತಿ ಹಚ್ಚಿಡುವುದನ್ನು ಅಲ್ಲಿಂದ ಮುಂದೆ ನಿಲ್ಲಿಸಿರಲಾರರು. ಆದ್ದರಿಂದಲೇ ಪ್ರಾಣ, ಘ್ರಾಣ ಎರಡನ್ನೂ ಉಳಿಸಿ ಕೇವಲ ಅಪಮಾನ ಮಾತ್ರ ಮಾಡಬೇಕೆಂದು ಬಯಸುತ್ತಿದ್ದವರೆಲ್ಲರೂ ಸೆರೆಸಿಕ್ಕಿದ ಶತ್ರುವಿನ ಮೂಗನ್ನು ಕೊಯ್ದು ಅವನನ್ನು ಅಟ್ಟಿಬಿಡುತ್ತಿದ್ದರು. ಮೊನ್ನೆಮೊನ್ನೆಯವರೆಗೂ ನಮ್ಮ ದೇಶದಲ್ಲೂ ಇದೇ ಪದ್ಧತಿ ಆಚರಣೆಯಲ್ಲಿತ್ತು. " ಹಾಳಾದವನ ಮೂಗು ಮುರಿಯಬೇಕು " ಎಂದು ನಮಗೆ ಆಗಾಗ ಅನ್ನಿಸುವುದೂ ಈ ಐತಿಹಾಸಿಕ ಸಂಸ್ಕಾರದಿಂದಲೇ. ಆದರೆ ಕಾನೂನು, ಕೋರ್ಟು, ಕಾರಾಗೃಹ ಇತ್ಯಾದಿಗಳಿಂದ ನಮ್ಮ ಆಸೆಯೆಲ್ಲವೂ ಅಂತರಂಗದಲ್ಲೇ ಅಂತರ್ಧಾನವಾಗುತ್ತಿವೆ. ಮಕ್ಕಳನ್ನು ಹೆತ್ತ ತಂದೆ ತಾಯಿಗಳಿಗೆ ಮಾತ್ರ ಕೊಂಚ ಅನುಕೂಲವುಂಟು. ಮೂಗು ಕೊಯ್ದು ಮೆಣಸಿನ ಪುಡಿ ತುಂಬುತ್ತೇವೆ ಎಂದು ಇಬ್ಬರೂ ಸೇರಿ ಆ ಬಡಕೂಸುಗಳನ್ನು ಹೆದರಿಸಬಹುದು. ಮೊದಮೊದಲು ಮೂಗನ್ನು ಕೊಯ್ದೇ ಬಿಡುತ್ತಿದ್ದರೆಂದು ಕಾಣುತ್ತದೆ. ಬರಬರುತ್ತಾ ಅಹಿಂಸಾ ತತ್ವಕ್ಕೆ ಮಾನವನು ಮನ್ನಣೆ ಕೊಡುತ್ತಾ ಬಂದ ಹಾಗೆಲ್ಲಾ ಮೂಗನ್ನು ಹಿಂಡಿದರೆ ಸಾಕು ಎಂಬ ಶಾಸ್ತ್ರವನ್ನು ಅವನು ಒಪ್ಪಿದನು. ಮಹಾಭಾರತದ ಕಾಲದಿಂದಲೂ ಮೂಗಿಗೆ ಬಣ್ಣ ಬಳಿಯುವುದು ವಾಡಿಕೆಯಲ್ಲಿದೆ. ಬಣ್ಣ ಎಷ್ಟು ಕೆಳಕ್ಕಿಳಿಯಬಹುದು ಎಂಬುದರ ಮೇಲೆ ಈಗಲೂ ವಾದವಿವಾದಗಳು ನಡೆಯುತ್ತಲೇ ಇವೆ. ಆದರೆ ಮೂಗಿನ ಮೇಲೆ ಬಿಳಿಯ ಬಣ್ಣವನ್ನು ಯಾರಾದರೂ ಬಲವಂತಕ್ಕೆ ಹಾಕಿದರೆ ವಿರಾಟ ರಾಜ್ಯದ ಗೊಲ್ಲರೂ ಕೂಡ ಸುಮ್ಮನೆ ದನ ಕಾಯುತ್ತಿರಲಿಲ್ಲ. ಕೂಡಲೇ ಹಾಹಾಕಾರ ಮಾಡುತ್ತಾ ಅವರು ಉತ್ತರಕುಮಾರನಲ್ಲಿಗೆ ಹೋಗಿ ದೂರು ಹೇಳುತ್ತಿದ್ದರು. ಮೂಗಿಗೆ ಸುಣ್ಣ ಹಚ್ಚುವುದೇ ಆಗಿನ ಕಾಲದಲ್ಲಿ ಯುದ್ಧಕ್ಕೆ ಪೀಠಿಕೆ! ಗೋಗ್ರಹಣದ ಮುಹೂರ್ತ ಸಮೀಪಿಸಿತು, ಎಂದು ವಿರಾಟರಾಯನಿಗೆ ಸೂಚನೆ ಕೊಡಲು ಸೂರ್ಯಪುತ್ರ, ಜಯದ್ರಥ, ಕೌರವಭ್ರಾತ ಮೊದಲಾದ ಅತಿರಥರು ಏನು ಮಾಡಿದರು ಎಂದು ನೀವು ನಾರಣಪ್ಪನನ್ನು ಕೇಳಿದರೆ ' ಗೋಪಾಲಕನೊಬ್ಬನ ಹಿಡಿದು ಮೂಗಿನ ಮೇಲೆ ಸುಣ್ಣವ ಬರೆದು ಬಿಟ್ಟರು ಹಗೆಯ ಪಟ್ಟಣಕೆ ' ಎಂದು ಗೊತ್ತಾಗುವುದು. ಸರಿ ದಾರಿಯುದ್ದಕ್ಕೂ ಜನ, " ತುದಿಮೂಗಿನಲಿ ಬಿಳುಪೇನು ? " ಎಂದು ಕೇಳಿ ದಂಡಧಾರಿಗಳಾದರು.

ಹೊರಮೂಗೆಂಬ ಈ ಹೊರೆಯನ್ನು ಪರಮಾತ್ಮನು ನಮಗೆ ಕೊಟ್ಟಿರುವುದು
ಅಥವಾ ಪರಿಣಾಮವಾದದ ಪರದಾಟದಲ್ಲಿ ನಾವು ನಾವೇ ಸಂಪಾದಿಸಿ
ಕೊಂಡದ್ದು ಯಾವ ಕಾರಣಗಳಿಗಾಗಿ ಎಂದು ಪತ್ತೆ ಹಚ್ಚುವುದು ಕಷ್ಟ
ವಾದರೂ ಮೂಗನ್ನು ನಾವು ಹಲವು ರೀತಿಯಲ್ಲಿ ಉಪಯೋಗಿಸಿಕೊಂಡಿ
ದ್ದೇವೆ. ಯೋಗಮಾರ್ಗದಲ್ಲಿ ಸಮಗ್ರ ಚಿತ್ತತೆಯ ಸಂಪಾದನೆಗೆ ನಾಸಾ
ಗ್ರವು ಅಮೂಲ್ಯವಾದ ಸಾಧನ. ಸ್ಥೂಲಚಕ್ಷುಗಳ ದೃಷ್ಟಿಯನ್ನು ಏಕೀಕರಿಸಿ
ಬಾಹ್ಯ ಪ್ರಪಂಚದಿಂದ ಹಿಂದಕ್ಕೆಳೆದು ನಿಲ್ಲಿಸಲು ಮೂಗಿನ ತುದಿಯಷ್ಟು
ಪ್ರಶಸ್ತವಾದ ಸ್ಥಳ ಬೇರೊಂದಿಲ್ಲ. ಹಾಗೆಯೇ ನಮ್ಮ ಮನೋರಥಗಳೆಲ್ಲವೂ
ಹೂತು ಕುಳಿತಾಗ ಮುಂದೇನು ಮಾಡುವುದೆಂಬ ಯೋಜನೆಯಲ್ಲಿ ಮಗ್ನ
ರಾದ ನಮಗೆ ಏನೂ ತೋಚದೇ ಇದ್ದಾಗ, ಮೂಗಿನ ಮೇಲೆ ಬೆರಳಿಟ್ಟರೆ
ಎಷ್ಟೋ ಶಾಂತಿ ಸುಖ ಸಮಾಧಾನಗಳು ಒಳಮೂಡಿ ತಣಿಸುತ್ತವೆ. "ಅವನಿ
ಪತಿ ಮೂಗಿನಲಿ ಕರಪಲ್ಲವವನಿಟ್ಟನು" ಇನ್ನು ಇವನಿಪತಿಗಳೇಕೆ ಅನು
ಮಾನಿಸಬೇಕು? ಪಾಂಚಾಲೀ ಸ್ವಯಂವರದ ಕಾಲದಲ್ಲಿ ನಮ್ಮ ಭರತ
ಖಂಡದಲ್ಲಿ 'ಬಾಯ ಮೌನದ, ಬೆರಳ ಮೂಗಿನ ರಾಯರು' ಅನೇಕರಿದ್ದ
ರೆಂದೂ ನಾರಣಪ್ಪನು ಹೇಳಿದ್ದಾನೆ. ನಶ್ಯ ತುಂಬಲು ಡಬ್ಬಿಗೆ ಬದಲಾಗಿ
ಮೂಗನ್ನೇ ಉಪಯೋಗಿಸುವ ಜಿಪುಣರು ನಮ್ಮಲ್ಲಿ ಅನೇಕರಿರುವರು.
ಸ್ನೇಹಿತರನ್ನು ಕಂಡರೆ ಕೈಕೈ ಹಿಡಿದು ಕುಲುಕುವುದಕ್ಕೆ ಬದಲಾಗಿ ಮೂಗಿಗೆ
ಮೂಗನ್ನು ಸೇರಿಸಿ ಉಜ್ಜುವುದು ಎಂಬ ಮರ್ಯಾದೆಯನ್ನು ಲಕ್ಷಾಂತರ
ಜನರು ಪ್ರಪಂಚದಲ್ಲಿ ಈಗಲೂ ಆಚರಿಸುತ್ತಿದ್ದಾರೆ. ಹೀಗೆ ನಾವು ಮೂಗಿಗೆ
ಹೊಸ ಉಪಯೋಗಗಳನ್ನು ಕಂಡುಹಿಡಿದು, ಮುಂದುವರಿದಿದ್ದೇವೆ.

ಮೂಗುಗಳಲ್ಲಿ ಹಲವು ಜಾತಿಯುಂಟು. ಕತ್ತಿ ಮೂಗು, ಗಿಣಿ ಮೂಗು,
ಕೊಕ್ಕರೆ ಮೂಗು, ಕೊಡಲಿ ಮೂಗು, ಗುದ್ದಲಿ ಮೂಗು, ಅಪ್ಪಚ್ಚಿ ಮೂಗು
ಎಂದು ಮುಂತಾಗಿ ಅವುಗಳಿಗೆ ಮಹಾಜನರು ನಾಮಕರಣ ಮಾಡಿದ್ದಾರೆ.
ಕೆಲವು ಮೂಗುಗಳು ಮುಖವನ್ನು ಬಿಟ್ಟು ಮೇಲಕ್ಕೇಳುವುದೇ ಇಲ್ಲ. ಕೆಲವು
ಎತ್ತಲೋ ತಿರುಗಿಕೊಂಡು ಬಿಡುತ್ತವೆ. ಕೆಲವು ಬಾಯೊಳಗೆ ಬಗ್ಗಿ
ನೋಡುತ್ತಾ ಕಾಲಕಳೆಯುತ್ತಿರುತ್ತವೆ. "ಮುಂಚೆ ಮೂಗು ರುಚಿ, ಆ
ಮೇಲೆ ಬಾಯಿ ರುಚಿ" ಎಂಬುದು ಇಂತಹ ಮೂಗುಗಳಿಗೆ ಅನ್ವಯಿಸುತ್ತದೆ.

ಆಯಾ ಪ್ರದೇಶಗಳ ಶೀತೋಷ್ಣಗಳಿಗನುಗುಣವಾಗಿ ಮೂಗಿನ ಅಗಲವೂ ಕಿರಿದು ಹಿರಿದಾಗಿ ಅದರ ಆಕಾರ ಬದಲಾಯಿಸುತ್ತದಂತೆ! ಆದರೆ ಇಂತಹ ಬದಲಾವಣೆಗೆ ಸಾವಿರಾರು ವರ್ಷಗಳ ಕಾಲಬೇಕು. ಒಂದೆರಡು ತಲೆಮಾರಿನಲ್ಲೇ ಮೂಗನ್ನು ತಿದ್ದುವುದಸಾಧ್ಯ. ಆದ್ದರಿಂದ ಒಂದು ಮನೆತನದಲ್ಲಿ ಸಾಮಾನ್ಯವಾಗಿ ಒಂದೇ ಜಾತಿಯ ಮೂಗು ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತಿರುತ್ತದೆ. ಹೀಗೆ ಕುಲಕ್ರಮಾಗತವಾದ ಮೂಗನ್ನು ತಿದ್ದಲು ಯಾರಿಂದಲೂ ಸಾಧ್ಯವಿಲ್ಲ. ಇದನ್ನರಿತೇ ನಮ್ಮ ಹಿರಿಯರು ಮೂಗಿನ ಡೊಂಕಿಗೆ ಪ್ರಾಚೀನ ಕರ್ಮವೇ ಕಾರಣ ಎಂದು ಸಾರಿದರು. ಈ ಸಿದ್ಧಾಂತಕ್ಕೆ ಅವರು ಗರುಡನನ್ನೇ ಉದಾಹರಣೆಯಾಗಿ ತೆಗೆದುಕೊಳ್ಳುತ್ತಾರೆ "ಗರುಡ ನಿತ್ಯದಲಿ ಸೇವೆಯ ಮಾಡಿ ವಿಷ್ಣುವನ್ನು ಹೊತ್ತುಕೊಂಡಿದ್ದ. ಅತ್ಯಂತ ಸೇವಕನೆಂದು ಶ್ರೀಕೃಷ್ಣ ಮೂಗಿನ ಡೊಂಕನು ಎತ್ತಿ ನೆಟ್ಟಗೆ ಮಾಡಲಿಲ್ಲ. ಪ್ರಾಚೀನ ಕರ್ಮ ಬಿಡಲರಿಯದು. ಯೋಚನೆ ಮಾಡಿ ನೀ ಬಳಲಬೇಡ" ಎಂದು ನಮ್ಮೆಲ್ಲರಿಗೂ ಹರಿದಾಸರು ಬುದ್ಧಿ ಹೇಳಿದಾರೆ.

---

**ಕಿವಿಯ ಡೊಂಕು** ೪

# ಕುಮಾರ ಸಂಭವ



"ಟ್ರಂಗ್....ಟ್ರಂಗ್....ಟ್ರಂಗ್! ಟ್ರಂಗ್...." "ಹಲೊ! ಹಲೊ! ಯಾರು?" "ಎಕ್ಸ್‌ಚೇಂಜ್ ಸಾರ್, ಮಾತನಾಡುತ್ತಿರುವುದು. ಬೆಂಗಳೂರಿಂದ ನಿಮಗೆ ಒಂದು ಕಾಲ್ ಬಂದಿದೆ! ೬೩೬೪.... ಹಲೊ ಹಲೊ ಹಲೊ ೧೩೨೨ ಮಾತನಾಡಿ.... ಮೂರೇ ನಿಮಿಷ...."

"ಯಾರು? ನೀವೇ? ಅಯ್ಯೋ! ಮನೆಯಲ್ಲೇ ಇದೀರಾ? ಹುಡುಗರು ಯಾರೂ ಇಲ್ಲವೆ? ಕ್ಲಬ್ಬಿಗೆ ಹೋಗಿಲ್ಲವೆ ಇವತ್ತು? ಹುಷಾರಾಗಿದೀರಿ ತಾನೆ?"

" ಏನು ಸಮಾಚಾರ? ಯಾಕೆ? ಇಷ್ಟು ಗಡಿಬಿಡಿ! ನಿನ್ನ ಕಾಗದ ಇವತ್ತು ಬೆಳಿಗ್ಗೆ ಬಂತು....ಎಲ್ಲಿಂದ ಮಾತನಾಡುತ್ತಿದೀಯಾ?"

" ಪಕ್ಕದ ಮನೆಯಿಂದ.... ಏನಾಯಿತು ಹೇಳಿ ಬೇಗ.... ಹೆರಿಗೆ ಆಯಿತೆ?"

" ಓ! ಮರೆತೆ! ನಾನೇ ಹೇಳಬೇಕಾಯಿತು.... ಹೆಂಗರುಳು ಅಂದರೆ ಹೀಗೇನೆ. ದೇವರ ದಯೆಯಿಂದ ಎಲ್ಲವೂ ಏನೂ ತೊಂದರೆ ಇಲ್ಲದೆ ಆಯಿತು."

" ನನಗದೇ ಹೆದರಿಕೆ ಇಲ್ಲಿ! ನಿಮ್ಮ ಸಹಾಯಕ್ಕೆ ಕೂಡ ಅಲ್ಲಿ ಯಾರೂ ಇಲ್ಲ! ಆಸ್ಪತ್ರೆಗೆ ಕರೆದುಕೊಂಡು ಹೋದಿರೇನು?"

" ಹೋಗದೆ? ಚೆನ್ನಾಯಿತು! ಮನೆಯಲ್ಲಿ ಯಾರಿದಾರೆ? ಈ ಹುಡುಗರು, ನಾನು! ಎಲ್ಲಿಯ ಗ್ರಹಚಾರ? ಕೈಮೀರಿ ಹೋದಮೇಲೆ ಕೈ ಕೈ ಹಿಸುಕಿ ಫಲವೇನು? ಆಮೇಲೆ ನೀನು ನನ್ನನ್ನ ಸುಮ್ಮನೆ ಬಿಡುತ್ತೀಯೇನು?.... ಯಾಕೆ? ಏನದು? ನಗುತ್ತೀಯಾ?"

" ಚೆನ್ನಾಯಿತು ಅಂದ್ರೆ! ನಗುವ ವಿಷಯವೇ ಇದು? ಹೇಳಿ ಬೇಗ.... ಆಮೇಲೆ...."

" ಅವಳು ಓಡಾಡುವುದನ್ನು ನೋಡಿ ನನಗೆ ನಿನ್ನೇನೆ ಅನುಮಾನ ಬಂತು. ಎದುರು ಮನೆ ಲಾಯರನ್ನು ಕೇಳಿದೆ. ಅವರಿಗೆ ಅನುಭವ ಇದೆಯಲ್ಲಾ. ರೈಲು ಸ್ಟೇಷನ್ ಬಳಿ ಆಸ್ಪತ್ರೆ ಇದೆ; ಚೆನ್ನಾಗಿದೆ; ಯಾವ ಆತಂಕವೂ ಇಲ್ಲ, ಅಂದರು. ಗಾಡಿ ಮಾಡಿಕೊಂಡು....ತಾಳೆ! ಹೇಳುತ್ತೇನೆ.... ಗಾಡಿ ಮಾಡಿಕೊಂಡು ಹೋಗಿ ಸೇರಿಸಿದೆ.... ನಿನಗೂ ಕಾಗದ ಬರೆದೆ. ಅಷ್ಟರವರೆಗಿನ ಸಮಾಚಾರಕ್ಕೆ...."

" ಆಮೇಲೆ?"

" ಆಮೇಲೆ...."

" ಹೇಳಿ ಬೇಗ.... ಹೇಗೆ ಆಯಿತೆ?"

" ಬೆಳಗ್ಗೆ ೧೦ ಗಂಟೆಗೆ ಹೆರಿಗೆ ಆಯಿತು."

" ಹೋಗಿ ನೋಡಿದಿರಾ?"

" ಹೋಗದೆ? ನಾನೇನು ಅಂತಹ ಕಲ್ಲು ಮನಸ್ಸಿನ ಒಡ್ಡನೇ?... ನಿನ್ನಷ್ಟಿಲ್ಲದೆ ಇದ್ದರೂ ನನಗೂ ಕೊಂಚ ಕರುಣೆ ಪ್ರೀತಿ ಸ್ನೇಹ...."

"ಅದೆಲ್ಲ ಯಾಕೆ, ಈಗ? ಹೋಗಿ ನೋಡಿದಿರಾ?"

"ಹೋಗಿದ್ದೆ. ಹುಷಾರಾಗಿದಾಳೆ. ಡಾಕ್ಟರು ತುಂಬಾ ಒಳ್ಳೆಯವರು. ಬಂದು ಬಂದು ನೋಡಿಕೊಂಡು ಹೋಗುತ್ತಿದಾರೆ."

"ಮಗು ಹೇಗಿದೆ"

"ದುಂಡು ದುಂಡಗೆ! ಭಾರಿ, ತೋಳ!...."

"ಥೂ! ಬಿಡ್ತು ಅನ್ನಿ!.... ತಾಯಿಗೆ ಆಹಾರ....?"

"ಎಲ್ಲ ಅಲ್ಲೇ ಕೊಡುತ್ತಿದಾರೆ.... ಸದ್ಯಕ್ಕೆ ನೀನು ಅಲ್ಲಿಂದ ಒಂದೇ ಹಾರಿಗೆ ಧುಮುಕಿ ಬಿಡಬೇಡ. ತಾಯಿ ಮಕ್ಕಳ ಶುಶ್ರೂಷೆ ಪುಷ್ಕಳವಾಗಿ ನಡಿಯುತ್ತಿದೆ. ದಿನಕ್ಕೆ ಅದೆಷ್ಟೋ ಚಾರ್ಜು ಮಾಡುತ್ತಿದಾರೆ.... ಇನ್ನೊಂದು ಸಮಾಚಾರ!.... ಮಧ್ಯಾಹ್ನ ನಾನು ಆಸ್ಪತ್ರೆಗೆ ಹೋದಾಗ ಅವಳು ಏನು ಮಾಡಿದಳು ಗೊತ್ತೆ?"

"ಹೇಳಲೋ?"

"ಹೇಳು!"

"ಓಡಿಬಂದು ನಮಸ್ಕಾರ ಮಾಡಿದಳು."

"ಅಯ್ಯೋ! ಹುಚ್ಚಿ!"

"ಸಾರ್! ಇನ್ನು ಒಂದೇ ನಿಮಿಷ, ಸಾರ್! ಬೇಗ ಮುಗಿಸಿ."

"ಅಯ್ಯೋ ಹುಚ್ಚಿ! ಹೆರಿಗೆ ಆದ ತಕ್ಷಣ ಓಡುವುದಂತೆ, ನಮಸ್ಕಾರ ಮಾಡುವುದಂತೆ!··· ನೀನು ಮಕ್ಕಳನ್ನು ಹೆತ್ತಿದ್ದರಲ್ಲವೆ? ಇನ್ನೂ ಚಿಲ್ಲು ಚಿಲ್ಲು!"

"ಮಹಾ ಅನುಭವವಿರುವವರ ಹಾಗೆ....!"

"ಸಾಕು, ಸುಮ್ಮನಿರೆ! ಯಾವಾಗ ಸವಾರಿ ಇತ್ತ ಕಡೆ ಚಿತ್ತೈಸು·ವುದು?"

"ಅಮ್ಮನಿಗೆ ಕೊಂಚ ವಾಸಿ ಅಂತ ಡಾಕ್ಟರ್ ಹೇಳಿದ ತಕ್ಷಣ ಹಾಜರ್, ಅಲ್ಲಿ! ದಿನವೂ ವಿಚಾರಿಸುತ್ತಾ ಇರಿ. ಫೋನ್ ಮಾಡಿ ಈ ನಂಬರಿಗೆ...."

"ಅದು ಯಾವುದು ಫೋನು? ಎ. ಆರ್. ಪೀ. ದೆ?"

"ಯಾವುದಾದರೆ ತಾನೆ ಏನು? ಕೇಳಿಸುತ್ತೆ!.... ತಾಯಿ ಮಕ್ಕಳದು ಫೋಟೋ ತೆಗೆದು ಕಳುಹಿಸಿ."

“ಅಯ್ಯೋ ! ಅಯ್ಯೊ ! ಅಯ್ಯೊ ! ಏನು ಆಸೆ ? ಏನು ಮೋಹ !.... ಅದು ಸರಿ ! ಈ ನಿನ್ನ ಅವಾಂತರದಲ್ಲಿ ಎಷ್ಟು ಮಕ್ಕಳು ಅಂತ ಕೇಳಲೇ ಇಲ್ಲವಲಾ ನೀನು, ಬುದ್ಧಿವಂತೆ !”

“ಯಾಕೆ ? ಅವುಳಿ ಜವುಳಿ ಏನು ?.... ಹೇಳಿ.... ಬೇಗ ಹೇಳಿ !”

“ಅವುಳಿ ಜವುಳಿ ? ಏನು ನೀನು ಹೇಳುವುದು ? ಅವುಳಿ ಜವುಳಿ ಗೊಂದು ಅವುಳಿ ಜವುಳಿ !”

“ನಾಲ್ಕೇ ?”

“ಹುಂ.”

“ದೇವರೇ ಗತಿ.”

“ಎರಡು ಗಂಡು, ಎರಡು ಹೆಣ್ಣು....”

“ಬಣ್ಣ !”

“ನಾಲ್ಕೂ ಬೆಳ್ಳಗೆ! ಆದರೆ, ಕೇಳಿಲ್ಲಿ, ಎಲ್ಲಕ್ಕೂ ಬಾಲದ ತುದಿ ಮಾತ್ರ ಕಪ್ಪು.”

“ಹಾಗಾದರೆ ಅವಳ ಹಾಗೇನೆ, ಎಲ್ಲಾನೂ ! ಯಾರಿಗೂ ಕೊಡ ಬೇಡಿ, ಒಂದು ಮರೀನೂವೆ.”

“ಸಾರ್, ಟೈಂ ಆಯಿತು.”

---

## ತೊದಲ ಡೊಂಕು ೫

### “[illegible]ಂಡೇ [illegible]ಂಡಾ”

—O—

ನಿಜವಾಗಿಯೂ ಹೇಳುತ್ತೇನೆ, ಅನೇಕ ದಂಪತಿಗಳಿಗೆ ಮಕ್ಕಳಾಗಲೇ ಕೂಡದು. ನನ್ನ ತಂದೆ ತಾಯಿಗಳೇ ಇದಕ್ಕೆ ಉದಾಹರಣೆ. ಅವರ ಮಾತು ಕೇಳಿದರೆ, ನನಗೆ ರೇಗುತ್ತೆ. ಅವರು ನಿರೀಕ್ಷಣೆ ಮಾಡಿದ ದಿನ ನನಗೆ ಹಲ್ಲು ಹುಟ್ಟಲಿಲ್ಲವಂತೆ, ಮುಂದಿನ ನಾಲ್ಕು ಹಲ್ಲುಗಳು ! ಅಯ್ಯೋ, ಅಯ್ಯೋ !

ಅದೇನು ರಂಪ ಎಬ್ಬಿಸಿಬಿಟ್ಟರು, ಇಬ್ಬರೂ ಸೇರಿಕೊಂಡು! ಮೂರು ನಾಲ್ಕು ದಿನ ಹೆಚ್ಚು, ಕಡಿಮೆ, ತಡೆದು ನೋಡಬಾರದೇ? ತಾಳ್ಮೆ ಇರಬೇಡವೇ? ಪ್ರಪಂಚದಲ್ಲಿ ಬೇರೆ ಯಾರಿಗೂ ಮಕ್ಕಳೇ ಆಗಿಲ್ಲವೇ? ಅವಕ್ಕೆಲ್ಲಾ ಕಾಲಕಾಲಕ್ಕೆ ದಂತಪಂಕ್ತಿಗಳು ಬಾಯಿ ತುಂಬ ಬಂದಿಲ್ಲವೇ? ಆತುರ, ಅನುಮಾನ, ಅಹಂಕಾರ! ನನಗೇನೂ ಅಷ್ಟು ಅವಸರವಿರಲಿಲ್ಲ. ಇನ್ನೂ ಹತ್ತಾರು ವರ್ಷ ಬಾಳಿ ಬದುಕ ಬೇಕಾಗಿರುವಾಗ, ನಾಲ್ಕು ದಿನ ತಡವಾಗಿ 'ಹಲ್ಲಿಗ' ಅಂತ ಅನ್ನಿಸಿಕೊಂಡರೆ ಏನಂತೆ ಮಹಾ! ಅದೂ ಅಲ್ಲದೆ, ಅವು ಒಳಗಿಂದ ಇಳಿಯುತ್ತಿದ್ದದ್ದನ್ನೂ ನಾನು ಬಲ್ಲೆ. ಆದರೆ, ಅವರಿಗೆ ಸಹನೆ ಸಾಲದು. ಯಾವುದೋ ಪುಸ್ತಕದಲ್ಲಿ ಓದಿಬಿಟ್ಟರು ಅಂತ ಕಾಣುತ್ತೆ: "ಜನನಾನ್ತರ ೩೦೦ ದಿನಕ್ಕೆ ಶಿಶುವಿಗೆ ದಂತದ ಕಾಣಿಕೆ ಆಗಬೇಕು" ಅಂತ. ನನ್ನ ತಂದೆ, ನನ್ನ ಬಾಯೊಳಗೆ ಬೆರಳಿಟ್ಟು ಹುಡುಕಿದ್ದು ಹುಡುಕಿದ್ದೇ! ತಾಯಿಗೆ ಕಣ್ಣಲ್ಲಿ ನೀರೆ ಬಂದುಬಿಟ್ಟಿತ್ತು. ಕೆನ್ನೆಗೂ ಇಳಿಯಿತು. ಗಲ್ಲದಿಂದ ತೊಟ್ಟಿಕ್ಕಿತು. "ಬಾಯಿ ಕೊಟ್ಟ ದೇವರು ಹಲ್ಲು ಕದಿಯುತ್ತಾನೆಯೇ" ಅಂತ ನನ್ನ ನೆರಸು ಹೇಳಿದರೂ ಅವಳಿಗೆ ಸಮಾಧಾನವಾಗಲಿಲ್ಲ. ಬೋಳು ಬಾಯಿ ಅಂತ ನನ್ನ ಕಂದನನ್ನು ಎಲ್ಲರೂ ಬೈಯುತ್ತಾರಲ್ಲಾ ಅಂತ ನನ್ನನ್ನ ಎದೆಗೆ ತಬ್ಬಿಕೊಂಡರು. ತಂದೆಗಂತೂ ಮುಖ ಸಪ್ಪಗಾಯಿತು. ತಲೆ ತಪ್ಪಿಸಿಕೊಂಡು ನಿಧಾನವಾಗಿ ಅಲ್ಲಿಂದ ಕದಲಿದರು.

ಹಲ್ಲು ಬರಲು ಪ್ರಾರಂಭವಾದ ಮೇಲೆ ಅವರಿಗಿನ್ನೊಂದು ಗಾಬರಿ. ಹತ್ತು ತಿಂಗಳು ಬೆಳೆದರೂ ಕೂಡ ನನಗೆ ಮಾತು ಬರಲಿಲ್ಲವಂತೆ! ಅವರ ದಿಗಿಲು ನೋಡಿ ನನಗೂ ಕೊಂಚ ಗಾಬರಿಯಾಯಿತು. ಏನೇನೋ ಅಂದು ನೋಡಿದೆ. 'ಗಾ'....'ಗೂ' ಎಂದು ಮಾತ್ರ ಹೊರಕ್ಕೆ ಕೇಳಿಸುವುದು. ನನಗೇ ಅದರ ಅರ್ಥ ಗೊತ್ತಾಗುತ್ತಿರಲಿಲ್ಲ. ಅವರೂ ಕೂಡ 'ಗಾ' ಅಂದಾಗ ಏನೇನನ್ನೋ ತಂದು ಕೊಡುವರು. ಗಾಣಿಗನ ಕೊಡ, ಗಾಂಪ ರೊಡೆಯರ ಚಿತ್ರ, ಗಾಂಧಿ ಗೊಂಬೆ, ಗಾಯದ ಮುಲಾಮು, ಗಾಲ್‌ಸ್‌ವರ್ತಿ ನಾವೆಲು, ಗಾಳಿಪಟ.... ನನಗೆ ತುಂಬಾ ರೇಗಿತು. 'ಗೂ' ಅಂದೆ. ಆಗ ನನ್ನ ಅಜ್ಜಿಗೆ ತುಂಬಾ ಸಂತೋಷವಾಯಿತು. "ನೋಡೆ! ನಿನ್ನನ್ನು ಗೂಬೆ ಅಂತ ಬೈಯುತ್ತೆ, ಹೇಗೆ ತಿಳಿಯಿತು ಇದಕ್ಕೆ?" ಅಂತ ತನ್ನ

ಸೊಸೆಗೆ, ಅಂದರೆ, ನನ್ನ ತಾಯಿಗೆ ಹೇಳಿ ಚಪ್ಪಾಳೆ ತಟ್ಟಿದರು. ಗೂಬೆ ಅಂದರೆ ಏನು ಅಂತ ನನಗೆ ಗೊತ್ತಿಲ್ಲ. ಪತ್ತೆ ಹಚ್ಚಬೇಕು. ಕೆಲವು ದಿನ ಗಳಾದ ಮೇಲೆ, ‘ ಗಾಗಾ ’ ‘ ಗೂಗೂ ’ ಗಳ ಜೊತೆಗೆ ‘ಗಾಗೂ’ ‘ಗೂಗಾ’ ಎಂಬ ಹೊಸ ಮಾತುಗಳನ್ನು ಸರಾಗವಾಗಿ ಹೊರಡಿಸಲು ಕಲಿತೆ. ಅವು ಗಳನ್ನೇ ನನ್ನ ರೋದನ ಮೋದನಗಳ ನಡುವೆ ಆಗಾಗ ಪ್ರಯೋಗಿಸಲು ಉಪಕ್ರಮಿಸಿದೆ. ಆದರೆ, ಇದರಿಂದ ತಂದೆಯವರಿಗೆ ತೃಪ್ತಿಯಾದಂತೆ ಕಾಣ ಲಿಲ್ಲ. ಆಮರಣಾಂತವೂ, ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಾ ಶ್ರಮಗಳಲ್ಲೆಲ್ಲಾ ಬರೀ ಗಾಗೂ ಗೂಗಾ ಗಳಿಂದಲೇ ಪ್ರಪಂಚ ವ್ಯವಹಾರ ವನ್ನು ನಾನು ಸಾಧಿಸಬೇಕಲ್ಲಾ ಎಂದು ಅವರು ಗಳಗಳ ಗೋಳಾಡಿದರು. ನನ್ನ ತಾಯಿಯ ತಾಪತ್ರಯವಂತೂ ಹೇಳಿ ತೀರದು.

ಎಷ್ಟಾದರೂ ಹಿರಿಯ ಮಗ,....ಅಲ್ಲ....ಹಿರಿಯ ಮಗು ! ಅವರ ಸಂಕಟ ನನ್ನನ್ನೂ ಬಾಧಿಸಿತು. ಏನಾದರೊಂದು ಮಾತನ್ನು ಉಚ್ಚಾರ ಮಾಡಿ ನನ್ನ ಜನ್ಮದಾತೃಗಳ ತಪ್ತ ಮಾನಸವನ್ನು ತಂಪು ಮಾಡಬೇಕೆಂದು ನಾನು ತೀರ್ಮಾನಿಸಿದೆ. ಹೆಬ್ಬೆಟ್ಟು ಚೀಪುವಾಗಲೆಲ್ಲಾ ನನಗೆ ಅದೇ ಯೋಚನೆ. ತೊಟ್ಟಿಲೊಳಗೆ ಕಣ್ಣು ಮುಚ್ಚಿ ಮಲಗಿದ್ದಾಗಲೆಲ್ಲಾ ನನಗೆ ಅದೇ ಮಹಾ ಸಮಸ್ಯೆ. ಅಜ್ಜಿಯ ತೊಡೆಯ ಮೇಲೆ ಕುಳಿತು ಆಕೆಯ ಕಿವಿ ಹಿಡಿದು ಎಳೆಯುವಾಗಲೂ ‘ ಗಾಗೂ ಅಲ್ಲದೆ ಬೇರೊಂದು ಮಾತನ್ನಾಡ ಲಾರೆನೇ ’ ಎಂಬುದೇ ಚಿಂತೆ.

ಕಡೆಗೆ ಒಂದು ದಿನ ಸಂಜೆ, ನಾನು ನಿನ್ನ ತಂದೆಯ ಮೇಜಿನ ಕೆಳಗೆ ಕುಳಿತು ಇರುವೆಗಳನ್ನು ಹಿಸುಕಿ ಕೊಲ್ಲುತ್ತಿದ್ದಾಗ, ಅವರು ಸರಕ್ಕನೆ ಬಂದು ಕುರ್ಚಿಯಲ್ಲಿ ಕುಳಿತು ಕಾಲು ನೀಡಿದರು. ನಾನು ಅವರ ಹೆಬ್ಬಟ್ಟಿನ ಮೇಲೆ ಒಂದು ಇರುವೆಯನ್ನು ಹರಿಯ ಬಿಟ್ಟೆ. ಅದು ಅವರನ್ನು ಕಚ್ಚದೆ ಕೆಳಕ್ಕೆ ಜಾರಿ ಬಿತ್ತು. ಆಗ, ನಾನೇ ಅವರ ಬೆಟ್ಟನ್ನು ಜಿಗುಟಿದೆ. ಆಗ ಅವರು ಕೆಳಗೆ ಬಗ್ಗಿ ನೋಡಿ : “ —ಂಡೇ —ಂಡಾ ” ಅಂದರು. ಆ ಮಾತಿನ ಧೋರಣೆ, ಅದರಲ್ಲಿ ಅಡಕವಾದ ಪ್ರಾಸ, ಅದರೊಳಗಿಂದ ಹೊರಹೊಮ್ಮಿದ ‘ ಘಂಟಾಘೋಷ ’ ನನ್ನ ಮನಸ್ಸನ್ನು ಸೂರೆ ಮಾಡಿತು. ನನಗೆ ಗಾಗೂ

ಗಳ ಮೇಲೆ ವೈರಾಗ್ಯ ಹುಟ್ಟಿತು. ಆ ಕ್ಷಣದಿಂದ, ನಾನು, ಯಾರ ತೊಡೆಯ ಮೇಲೆ ಕುಳಿತಿದ್ದರೂ ನನ್ನನ್ನು ಯಾರು ಯಾವ ರೀತಿ ಮುದ್ದಿಸುತ್ತಿದ್ದರೂ ನನ್ನ ಧ್ಯಾನ, ಧಾರಣ, ಸಮಾಧಿಗಳೆಲ್ಲವೂ ಕೇವಲ " —ಂಡೇ —ಂಡಾ " ಎಂಬ ಮಾತಿನ ಮನನದಲ್ಲೇ ಇತ್ತು. ರಾತ್ರಿ ತೊಟ್ಟಿಲಲ್ಲೇ ಅದನ್ನು, ನನಗೆ ನಾನೇ ನೂರಾರು ಸಲ ಅಂದು, ಅದರ ಮಾಧುರ್ಯಕ್ಕೆ ಮೆದುಳನ್ನು ಅಡವಿಟ್ಟೆ. " .... —ಂಡೇ —ಂಡಾ ಹಾ! ಮೆರೆಯೆ ಮರಿಗನ್ನಡಂ " ಎಂದು ನನಗೆ ನಾನೇ ಜಯಘೋಷ ಮಾಡಿಕೊಂಡಿದ್ದೇನೆ.

ನಾನು ಆ ಮಾತನ್ನು ಚೆನ್ನಾಗಿ ಅಭ್ಯಾಸ ಮಾಡಿ ಪ್ರಯೋಗಕ್ಕಾಗಿ ಕಾದಿದ್ದೆ. ಪಕ್ಕದ ಮನೆ ಕಾಟಾಚಾರ್ಯರು ನನ್ನ ಕೊಠಡಿಯೊಳಕ್ಕೆ ಬಂದರು. ' ಕಾಟಾಚಾರ್ಯರು ' ಅಂತ, ನಾನು ಅವರಿಗಿಟ್ಟ ಹೆಸರು. ಬೇರೊಬ್ಬರಿಗೂ ಅದಿನ್ನೂ ಗೊತ್ತಿಲ್ಲ. ಅವರು ಬಂದು ನನ್ನನ್ನು ಎತ್ತಿ ಮುತ್ತಿಟ್ಟರು. ಹಾಳು! ನಶ್ಯದ ಮೂಗು! ಎಂಟು ಹತ್ತು ದಿನ ಬೆಳೆದ ಮುಳ್ಳು ಬೇರೆ ಮುಖದ ತುಂಬ! ಆದರೂ ನನ್ನ ಹೊಸ ಮಾತನ್ನು ಅವರ ಕಿವಿಯಲ್ಲಿ ಹೇಳಿದೆ. ನಾನು ಅವರನ್ನು " —ಂಡೇ —ಂಡಾ " ಎಂದು ಕೂಗಿದೆ, ತಂದೆಯವರು ನನ್ನನ್ನು ಅಂದ ಹಾಗೆ, ಚಾಚೂ ತಪ್ಪದೆ! ನನ್ನ ಮಾತಿಗೆ ಅವರು ತುಂಬಾ ಕೋಪಿಸಿಕೊಂಡರು. " ಅಯ್ಯೋ ಇವನೇ ! " ಅಂತ ಹೇಳುತ್ತಾ ನನ್ನನ್ನು ಧುಡುಂ ಅಂತ ಕೆಳಕ್ಕೆ ಎಸೆದೇ ಬಿಟ್ಟರು. ನಾನು ಕಿಟೋ ಅಂತ ಕೂಗಿದೆ. ಅವರಿಬ್ಬರೂ ಬಂದರು. ಅಜ್ಜಿಯೂ ಬಂದರು. ಅಳುವಿನ ನಡುವೆ ನಾನು ಮತ್ತೆ " —ಂಡೇ —ಂಡಾ " ಅಂದೆ. " ಯಾರೋ ? " ಅಂದರು ಅಜ್ಜಿಯವರು. ಅವರಿಗೂ " —ಂಡೇ —ಂಡಾ " ಅಂದೆ. ತಕ್ಷಣ ಅವರು ನನ್ನನ್ನು ಮುತ್ತಿಡುವ ಬದಲು ನನ್ನ ಕೆನ್ನೆಗೆ ಒಂದು ಕೊಟ್ಟರು.

ಯಾಕೋ, ಗೊತ್ತಾಗಲಿಲ್ಲ. ನೀವು ಯಾರಾದರೂ ತಿಳಿಸುತ್ತೀರೇನು? " —ಂಡೇ —ಂಡಾ " ಅಂದರೇನು ?' ಯಾಕೆ ಇವರು ಹೀಗೆ ರೇಗಾಡುತ್ತಾರೆ ?

---

# ಈ ನಾಲ್ಕು ಜನ

ನಮ್ಮ ಜೀವನದ ಮಟ್ಟಕ್ಕೂ ಅದರ ಪ್ರತಿಯೊಂದು ಘಟ್ಟಕ್ಕೂ ಈ ನಾಲ್ಕು ಜನರೇ ಕಾರಣಕರ್ತರು. ತಿಳಿದೋ ತಿಳಿಯದೆಯೋ ಅವರು ನಮ್ಮನ್ನು ನೆರಳಿನಂತೆ ಅನುಸರಿಸಿ ನಮ್ಮ ನಡಿಗೆ ಉಡಿಗೆಗಳನ್ನು ತಿದ್ದುತ್ತಿದಾರೆ. ನಮ್ಮ ಅವತಾರಕ್ಕೆ ಅವತಾರಿಕೆ ಬರೆದವರೇ ಅವರು. ನಮ್ಮ ನಿಮ್ಮ ಜೀವನವನ್ನು ಮಾತ್ರವೇ ಅಲ್ಲ, ಮಾನವ ಕುಲದ ಆದಿಯಿಂದಲೂ ಅವರು ಎಲ್ಲರ ಶಿಕ್ಷಣ ರಕ್ಷಣಗಳನ್ನು ಹೊತ್ತು ನಿರ್ವಹಿಸುತ್ತಿದಾರೆ. ಪಂಚ ಮಹಾಪಾತಕಿಗಳಿಗಿಂತ, ಷಡ್ರಿಸಿಕರಿಗಿಂತ, ಸಪ್ತ ಋಷಿಗಳಿಗಿಂತ, ಅಷ್ಟಾವಕ್ರರಿಗಿಂತ, ಈ ನಾಲ್ವರು ತೇಜೋವಧೆ ಟೋಜೋವಧೆ ಮಾಡಬಲ್ಲರು; ಓಜೋಭಿವೃದ್ಧಿ ಮಾಡಬಲ್ಲರು! ಅವರು ಯಾರೋ ಎಲ್ಲಿರುವರೋ ಎಂಬುದು ಅಷ್ಟು ಮುಖ್ಯವಲ್ಲ. ಅವರಿಗೆ ಕುಲಗೋತ್ರವೂ ಇಲ್ಲ. ಆದರೂ, ಅವರೇ ನಮ್ಮ ನಾಗರಿಕತೆಯ ನಾಲ್ಕು ಕಂಬಗಳು.

ನಾವು ಹುಟ್ಟಿದಾಗ ನಾಲ್ಕು ಜನರು ಸಂತೋಷಪಡುತ್ತಾರೆ; ಸಕ್ಕರೆ ಬೇಡುತ್ತಾರೆ; ನಮ್ಮ ವೇದನಾರವಿಂದವನ್ನು ಕಂಡು ನಾಲ್ಕು ಜನರು ಮರುಗುತ್ತಾರೆ. ಅಷ್ಟೇಕೆ?.... ನಾವು ಹುಟ್ಟಿದ್ದೇ ನಾಲ್ಕು ಜನರ ಪ್ರೇರಣೆಯಿಂದ. ಒಂಟಿಸಲಗದಂತೆ ನಿತ್ಯ ಬ್ರಹ್ಮಚಾರಿಯಾಗಿ ದೀಪವಿಲ್ಲದ ದೀಪಸ್ತಂಭದಂತೆ ಮಕ್ಕಳು ಮರಿಗಳನ್ನು ಪಡೆದು ಭೂಭಾರವನ್ನು ಹೆಚ್ಚಿಸದೆ ಬಾಳಿ ಬದುಕಿದರೆ ನಾಲ್ಕು ಜನರು ಛೀಯಾಳಿಸುತ್ತಾರಲ್ಲಾ ಎಂಬ ಭೀತಿಗಾಗಿಯೇ ತಂದೆಯರು ಕಾಶಿಯಾತ್ರೆಯಿಂದ ಹಿಂತಿರುಗಿ ಗೃಹಸ್ಥಾಶ್ರಮವನ್ನು ಹೊಕ್ಕಿದ್ದು! ನಾಲ್ಕು ಮಕ್ಕಳಿದ್ದರೂ ನಾಲ್ಕನೆಯ ಮದುವೆ ಮಾಡಿಕೊಳ್ಳುವವರೂ ಕೂಡ ಒಂಟಿಯಾಗಿ ತಿರುಗಾಡಿದರೆ ನಾಲ್ಕು ಜನ ಏನಂದಾರು

ಎಂಬ ಸಂದೇಹದಿಂದಲೇ! ನಾಲ್ಕು ಜನರು ಏನು ಹೇಳಿ ಬಿಡುತ್ತಾರೋ ಎಂಬ ಅನುಮಾನದಿಂದಲೇ ವರದಕ್ಷಿಣೆ ವರೋಪಚಾರಗಳಿಗಾಗಿ ಸಾಲಂಕೃತ ಕನ್ಯಾದಾನ ಮಾಡಿದ್ದು, ನಮ್ಮ ಅಜ್ಜಂದಿರು. ಸಾಲೋಗರವಾದರೂ ಹಾಲೋಗರವನ್ನೇ ಬಡಿಸಿ ಬೀಗರನ್ನು ಸಂತೈಸಿ, ಕೇವಲ ಬಡಗರದಿಂದಾದರೂ ಸಡಗರಪಟ್ಟು ನಾಲ್ಕು ಜನರ ನಾಲಿಗೆಯ ಹರಿತಕ್ಕೆ ಹೆದರಿ ಅವರು ಮದುವೆಯನ್ನು ಯಥಾ ವಿಧಿಯ ಬರಹ ನೆರವೇರಿಸಿದರು. ಆಮೇಲೆ ನಮ್ಮ ತೀರ್ಥರೂಪರು ತಿಂಡಿ ತೀರ್ಥಗಳಿಗಾಗಿ ತಿರುಪೆ ಎತ್ತಿ ಸಂಬಳ ಸಾರಿಗೆಗಳಿಗಾಗಿ ಹಲ್ಲು ಕಿರಿದ್ದು, ಮಠ ಸೇರದೆ ಮನೆಯನ್ನೇ ಕುದುರಿಸಿದ್ದು,— ಎಲ್ಲವೂ ನಾಲ್ಕು ಜನರ ನಡುವೆ ಗೌರವ ಸಂಪಾದಿಸುವ ಸಲುವಾಗಿ; ಮನೆವಂತ, ಮಕ್ಕಳೊಂದಿಗ, ಸಂತಾನ ಗೋಶಾಲ ಎಂಬ ಹೊಗಳಿಕೆಗಾಗಿ.

ಈ ನಾಲ್ಕು ಜನರೂ ನಮ್ಮ ತೊಟ್ಟಿಲ ಸುತ್ತ ಬಂದು ನಿಂತು, 'ಲೋ!' ಎಂದು ನಕ್ಕು ನಮ್ಮ ಬಾಯೊಳಗಿಂದ ಕಾಲಿನ ಹೆಬ್ಬೆಟ್ಟನ್ನು ಹೊರಕ್ಕೆಳೆಸುತ್ತಾರೆ. ಅವರಿಗೆ ಹೆದರಿ ನಾವು ಸ್ತನ್ಯಪಾನವನ್ನು ತ್ಯಜಿಸಿ ಅನ್ಯ ಪಾನವನ್ನು ಪ್ರಾರಂಭಿಸುತ್ತೇವೆ. ನಾಲ್ಕು ಜನರ ಸಾಜೋಕಿನ ಮಾತಿಗೆ ಮರುಳಾಗಿ ನಾವು ಎದ್ದು ನಿಂತು ತೊದಲುತ್ತೇವೆ. ಪರೀಕ್ಷೆ ಕಾಲದಲ್ಲಿ ಹುಡುಗರು ರಾತ್ರೋರಾತ್ರಿ ಬುರುಡೆ ಚಚ್ಚಿಕೊಳ್ಳುವುದು ಏತಕ್ಕಾಗಿ? 'ವಿದ್ಯಾವಿಹೀನಃ ಶಿಶು' ಎಂಬ ಪದ್ಯದ ಪ್ರಭಾವದಿಂದಲೇ? ಜೀವನೋಪಾಯಗಳ ಅಭಾವದಿಂದಲೇ? ಅಲ್ಲ. ಈ ನಾಲ್ಕು ಜನರು ಏನೆನ್ನುತ್ತಾರೋ ಎಂಬ ಭಯದಿಂದಲೇ. ಹುಡುಗಿಯರ ಶಿಂಗಾರ ಭಂಗಾರ, ಹುಡುಗರ ವಾಚು ಬಾಚುಗಳು, ಹಿರಿಯರ ಠೀವಿ ಠೇಂಕಾರಗಳು, ಎಲ್ಲವೂ ಈ ನಾಲ್ಕು ಜನರಿಗಾಗಿಯೇ. ಸಂಗೀತ ಕಲಿಯುವುದು ನಾಲ್ಕು ಜನರಿಗಾಗಿ; ಕಲಿತವನು ಹಾಡದೆ ಬಾಯಿ ಮುಚ್ಚಿಕೊಂಡು ಕುಳಿತಿರುವುದೂ ನಾಲ್ಕು ಜನರ ಟೀಕೆಗೆ ಹೆದರಿ. ನಾಲ್ಕು ಜನ ನಮ್ಮ ಸ್ಥಿತಿ ನೋಡಿ ನಕ್ಕಾರು ಎಂದು ಮನೆಯಾಕೆ ಕೂಗಿ ಅವಮಾನ ಪಡಿಸಿದಾಗ, "ಸುಮ್ಮನಿರಿ! ನಾಲ್ಕು ಜನ ಓಡಿ ಬಂದು ನಿನ್ನನ್ನ ನಾಟಕಿ ಅಂತ ಕೂಗುತ್ತಾರೆ" ಎಂಬುದೇ ಪ್ರತಿಕ್ರಿಯೆ. ಈ ನಾಲ್ಕು ಜನ ಕೇಳಲಿ, ನಾಲ್ಕು ಜನ ತಿಳಿದುಕೊಳ್ಳಲಿ, ನಾಲ್ಕು ಜನಕ್ಕೆ ಉಪಕಾರವಾಗಲಿ, ನಾಲ್ಕು ಜನ ಬರಲಿ, ನಾಲ್ಕು ದಿನ ಇರಲಿ ಎಂಬ

ಭಾವನೆಯಿಂದಲೇ ಪ್ರಪಂಚದಲ್ಲಿ ಸಾವಿರಾರು ಕೆಲಸಗಳು ಪ್ರತಿ ದಿನವೂ ನಡೆಯುತ್ತಿರುವುದು. ನಾವು ಯಾರ ಮೇಲೆ ಭಾರ ಹಾಕಿದರೂ, ಕಡೆಗೆ, ಭೂಮಿ ಮೇಲೆ ಭಾರ ಹಾಕುವ ಮೊದಲು ನಾಲ್ಕು ಜನರ ಮೇಲೆ ಭಾರ ಹಾಕಲೇಬೇಕಾಗುತ್ತದೆ. ಅವರೇ ನಮಗೆ ಆಧಾರ. ನಮ್ಮ ಹಾಗೆ ದಿನಕ್ಕೆ ನಾಲ್ಕು ಜನ ಕಾಲು ಚಾಚುತ್ತಾರಲ್ಲಾ ಎಂಬುದೇ ಆ ನಾಲ್ಕು ಜನರ ಜೀವನಾಧಾರ! ಹಾಗೆ ಹೊರಡುವಾಗ ನಾಲ್ಕು ಜನರ ಬಾಯಲ್ಲಿ ಒಳ್ಳೆಯವ ಎಂದೆನಿಸಿಕೊಂಡರೆ ನಾವೂ ನಾಲ್ಕು ಜನರಂತೆ ಬದುಕಿದ ಹಾಗಾಯಿತು....

---

ಮಕ್ಕಳೊಂದಿಗರ ಡೊಂಕು ೭

# ನೀಲಾಂಬರಿ

ಪ್ರಪಂಚದಲ್ಲಿ ಮನುಷ್ಯಪ್ರಾಣಿಗೆ ಮಕ್ಕಳಾಗುವುದೇನೂ ಹೊಸದಲ್ಲ. ಇದನ್ನು ಪ್ರತಿಯೊಬ್ಬರೂ ಬಲ್ಲರು. ಆದರೂ ತಂದೆತಾಯಿಂದಿರು ತಮ್ಮ ಮೊದಲು ಮೂರು ಮಕ್ಕಳು ಕೈ ಬೀಸಿದರೆ ಜೈ ಅನ್ನುವರು; ಆಕಳಿಸಿದರೆ ಬಾಯಿ ಬಿಡುವರು; ತೊದಲು ನುಡಿದರೆ ಚಪ್ಪರಿಸುವರು, ಹೊಸಲು ದಾಟಿದರೆ ಹೊರಳಾಡುವರು! ಯಾರೂ ಮಾಡದ ಮಹಾಕಾರ್ಯವನ್ನು ತಮ್ಮ ಮಕ್ಕಳು ಮಾಡಿದ ಹಾಗಿನ ಪರಮಾನಂದ ಅವರಿಗೆ! ತಾವೇ ಆಕಳಿಸಿದಷ್ಟು ತಾಮಸ! ತಾವೇ ತೊದಲಿದಷ್ಟು ತಾದಾತ್ಮ್ಯ ಭಾವ! ತಾವು ಬೃಹಸ್ಪತಿಯ ಮಾತಾಪಿತೃಗಳು ಎಂಬ ಹಿಗ್ಗು!

ಈ ಸಂತೋಷವನ್ನು ಬಾಗಿಲು ಹಾಕಿಕೊಂಡು ತಾವೇ ಸವಿದರೆ ಸಾಲದೆ? ಮನೆಗೆ ಬಂದವರಿಗೆಲ್ಲಾ ಮಗುವಿನ ಮೂಗು ಸಿಂಬಳವನ್ನು ಹಚ್ಚಿ ಕಳುಹಿಸುತ್ತಾರೆ. ಹುಡುಗನನ್ನ ಸರ್ಕಸ್ ಪ್ರಾಣಿಯಂತೆ ಸಿಂಗರಿಸಿ ಬಾಲಾಂಗುಚ್ಛ ಕಟ್ಟಿ ತಂದು ನಮ್ಮ ಮುಂದೆ ನಿಲ್ಲಿಸಿ, ಅದಕ್ಕೆ ಕಾಸಿನಾಸೆ ತೋರಿಸಿ ಹಂಗಿಸಿ ಹೆದರಸಿ ಅದರ ಬಾಯಿಂದ ಬಿದಿಗೆ ತದಿಗೆ ಹೊರಡಿಸುತ್ತಾರೆ.

ಇಂತಹ ಪುತ್ರ ಹಿಂಸೆಯ ಪ್ರಮೇಯಗಳನ್ನು ಕೇಳಿದನಂತರ ಅಂತಹ ಅತಿ ವಾತ್ಸಲ್ಯದವರ ಮನೆಗಳಿಗೆ ಹೋಗುವುದನ್ನೇ ನಿಲ್ಲಿಸಿ ಬಿಟ್ಟದ್ದೇನೆ, ನಾನು. ಎರಡರಿಂದ ಎಂಟರವರೆಗಿನ ವಯಸ್ಸಿನ ಮಕ್ಕಳಿರುವ ಮನೆಯೊಳಗೆ ಹೋಗದಿರುವುದೇ ಕ್ಷೇಮ.

ಆದರೆ, ನಾವಾಗಿ ನುಗ್ಗದೆ ಇದ್ದರೂ ಗ್ರಹಚಾರ ಅಂತ ಒಂದಿದೆಯಲ್ಲಾ, ನಾವಿದ್ದ ಕಡೆಗೇ ಆಪತ್ತುಗಳನ್ನು ತಂದೊದಗಿಸುವುದಕ್ಕೆ !

ಮೊನ್ನೆ ನನ್ನ ಪಾಡಿಗೆ ನಾನು ರೈಲಿನಲ್ಲಿ ಹೋಗುತ್ತಿದ್ದೆ. ಗಾಡಿಯಲ್ಲಿ ನಾನು, ಇನ್ನೊಬ್ಬಾತ, ಇಬ್ಬರೇ ಇಬ್ಬರು. ಮುಂದಿನ ಸ್ಟೇಷನಿಗೆ ಏದುತ್ತಾ ಹೋಯಿತು, ಎಂಜಿನು. ಎದುರಿಗಿದ್ದ ಆಸಾಮಿಯ ಶರ್ಟಿನ ಕಿಸೆಯ ಕೆಳಭಾಗದಲ್ಲಿ ಕಾಸಿನಷ್ಟಗಲ ಪೆಪ್ಪರ್ಮಿಂಟಿನ ಬಣ್ಣ ಕಾಣಿಸಿತು. ಬಲೆ ಬಲೆಯಾಗಿದ್ದ ಒಂದು ಚೀಲದೊಳಗಿಂದ ಮೂರು ಕಾಸಿನ ತಗಡಿನ ಪೀಪಿಯೊಂದು ನನ್ನನ್ನು ಅಣಕಿಸುತ್ತಿತ್ತು. ಗ್ರಹಚಾರ ! ಮಕ್ಕಳ ತಂದೆ ! ನಾನು ಪೇಪರನ್ನು ಹರಡಿ ಮುಖಕ್ಕಡ್ಡವಾಗಿ ಹಿಡಿದೆ; ಆದರೂ ಅವರು ಬಿಡಲಿಲ್ಲ. ಯಥಾಪ್ರಕಾರ, "ಮಕ್ಕಳ ಬುದ್ಧಿ, ಎಷ್ಟು ಅಂತೀರಾ, ರಾಯರೇ!" ಅಂತ ಪ್ರಾರಂಭಿಸಿಯೇ ಬಿಟ್ಟರು ! ನನಗೆ ರೇಗಿತು. ಪೇಪರನ್ನು ಕೆಳಗಿಳಿಸಿದೆ. ದುರದುರನೆ ಆ ಪಂಡಿತ ಪಿತನನ್ನೆ ನೋಡುತ್ತ ಕುಳಿತೆ. "ಮಕ್ಕಳ ಬುದ್ಧಿ ಎಷ್ಟು ಅಂತೀರಾ" ಎಂದರು. "ಎಷ್ಟು ?" ಅಂದೆ !

"ನನ್ನ ಚೇಚ್ಲುನ ಒಂದು ಸಾರಿ ಮೈಸೂರಿಂದ ಬೆಂಗಳೂರಿಗೆ ಕರೆದುಕೊಂಡು ಬಂದಿದೇನೆ, ಅಷ್ಟೆ ! ಉದ್ದಕ್ಕು ಎಲ್ಲಾ ಸ್ಟೇಷನ್ನುಗಳ ಹೆಸರನ್ನೂ ಹೇಳುತ್ತಾನೆ, ಈಗಲೂ ಮನೆಯಲ್ಲಿ. ಕೆಂಗೇರಿ, ಬಿಡದಿ ಹತ್ತಿರ ಮಾತ್ರ ಕೊಂಡ ತಡವರಿಸುತ್ತಾನೆ ಅಷ್ಟೆ !"

ನನ್ನ ತುಂಟು ಮೆದುಳು ಕಲಹಕೀಟಲೆಗಳಿಗಾಗಿ ಹಾತೊರೆಯುತ್ತಿತ್ತು ! ಪೇಪರನ್ನು ಬೆಂಚಿನ ಮೇಲಿಟ್ಟೆ. ಅಷ್ಟು ಹೊತ್ತಿಗೆ ಅವರು "ಯದುರಾಯರಿಂದ ಹಿಡಿದು ಇಲ್ಲಿಯ ವರೆಗೂ ಯದುವಂಶವನ್ನೆಲ್ಲಾ ಹೇಳುತ್ತಾನೆ" ಅಂತ ವಿವರಿಸಿ ಬಿಟ್ಟಿದ್ದರು. ಆಗ ನಾನು ಅವರ ಸ್ತೋತ್ರ

ಲಹರಿಯನ್ನು ತಡೆದು, “ ಕ್ಷಮಿಸಿ ಸಾರ್ ! ನಿಮ್ಮ ಹುಡುಗನಿಗೆ ಎಷ್ಟು ವಯಸ್ಸು ? ” ಅಂದೆ.

“ ಫಾಲ್ಗುಣಕ್ಕೆ ಐದು ತುಂಬಿತು. ”

“ ತುಂಬಿ ಹೋಯಿತೇ ? ಚಿಂತೆಯಿಲ್ಲ. ತಮ್ಮ ಹುಡುಗ ಎಂಟನೆಯ ಹೆನ್ರಿಯ ಹೆಂಡಿರ ಹೆಸರನ್ನೆಲ್ಲಾ ತಪ್ಪದೆ ಹೇಳುತ್ತಾನೆಯೋ ? ” ಎಂದೆ. ಯಾಕೋ ಏನೋ, ಅವರ ಕಳೆ ಕುಂದಿತು. ನಾನು ಮತ್ತೆ, “ ನಿಮ್ಮ ಹುಡುಗ ಆಕಾಶ ನೋಡಿಕೊಂಡು ‘ ಮೇಘದೂತ ’ ಹೇಳಬಲ್ಲನೇ ? ” ಎಂದೆ. ಅವರ ಮುಖ ಪೆಚ್ಚಾಯಿತು.

“ ಐದು ವರ್ಷ ಅಷ್ಟೆ, ನಮ್ಮ ಚೇಚ್ಚುವಿಗೆ ” ಅಂದರು.

ಇರಬಹುದು ಸ್ವಾಮಿ ! ಐದಲ್ಲ ನಾಲ್ಕೂವರೆ ಅಂತಲೇ ಇಟ್ಕೊಳ್ಳಿ ! ಆದರೆ ಅದೇ ವಯಸ್ಸಿನಲ್ಲೇ ನಮ್ಮೂರು ಶ್ಯಾನಭೋಗರ ಮಡುಗ ಅಪ್ಪನ ಖಾತೆ ಕಿರದಿ ಲೆಕ್ಕಗಳನ್ನೆಲ್ಲಾ ಬರೆದು ಮುಗಿಸುತ್ತಿದ್ದ ಒಂದೇ ರಾತ್ರೀಲಿ. ಪ್ರಚಂಡ ಪ್ರಸವ ಸ್ವಾಮೀ, ಅದು ! ಊಟಕ್ಕೆ ಕೂತಾಗ ಕಬಳಕ್ಕೆ ಒಂದು ಕವನ ಕಟ್ಟುವನು ! ಅವನು ಅತ್ತರೆ ರಾಗ ಮಾಲಿಕೆ ! ಕೆಮ್ಮಿದರೆ ಹಮ್ಮೀರ ಕಲ್ಯಾಣಿ ! ಶೀತರೆ ಸಿತಾರ್ !

ಎದುರಿಗಿದ್ದಾತನ ಮುಖದಲ್ಲಿ ಪೆಚ್ಚು ಹೆಚ್ಚಾಯಿತು. ಗಂಟಲು ಸರಿಪಡಿಸಿಕೊಂಡು “ ಆದರೂ ಮೇಘದೂತಾನೆಲ್ಲಾ....” ಅಂತ ಪ್ರಾರಂಭಿಸಿದರು. ಆ ವಾಕ್ಯವನ್ನು ಮುಗಿಸಲು ನಾನು ಅವಕಾಶ ಕೊಡಲಿಲ್ಲ.

“ ಸ್ವಾಮಿ ! ಮಲ್ಲಿನಾಥನಿಗೆ ಮೂರು ವರ್ಷವಾಗಿದ್ದಾಗಲೇ ಅವನು ಕಾಳಿದಾಸನ ಕೃತಿಗಳನ್ನು ಕೈಯ್ಯಲ್ಲಿ ಹಿಡಿದನಂತೆ, ಗೊತ್ತಿಲ್ಲವೆ ತಮಗೆ? “ ಭಾರವೇರರ್ಥಗೌರವಂ ” ಅಂತ ಕೇಳಿಲ್ಲವೇ ತಾವು? ಕಾಳಿದಾಸನಿಗೆ ಸಲ್ಲುವುದರ ಅರ್ಥ ಗೌರವ ಇವತ್ತೂ ಕೂಡ ಸಲ್ಲುವ ಭಾರವಿಗೆ ಮೊದಲು ಹುಟ್ಟಿದ ಹಬ್ಬದ ದಿನ ೧೨ ತಿಂಗಳು, ಅಷ್ಟೆ.... ”

ಚೇಚ್ಚುವಿನ ತಂದೆ ಕಿಟಕಿಯ ಕಡೆ ನೋಡುತ್ತಾ ಕುಳಿತರು. ಒಂದೆರಡು ಸಲ ತುಸು ಸುಯ್ದರು ! ಕೊಂಚ ಹೊತ್ತಿನ ಮೇಲೆ ಥಟಕ್ಕನೆ

ನನ್ನ ಕಡೆ ತಿರುಗಿ " ಬಿಡಿ ಅಂದ್ರೆ! ಗ್ರಂಥ ಬರೆಯುವದೇನು, ಮಹಾ! ಶಾಯಿ, ಕಡ್ಡಿ, ಕೊಟ್ಟರೆ ಮಕ್ಕಳು ಮೂರು ನಿಮಿಷದಲ್ಲಿ ಗೀಚಿ ಹಾಕಿ ಬಿಡುತ್ತವೆ ಹಾಳೆ ತುಂಬ. ಆದರೆ ಐದು ವಯಸ್ಸಿನಲ್ಲೇ ನನ್ನ ಚೀಚ್ಚುವಿನ ಹಾಗೆ ಚರಿತ್ರೆ, ರೈಲ್ವೆಗೈಡು ಇವುಗಳನ್ನ...." ಅಂತ ಮತ್ತೆ ಹೊಗಳು ತೆಗೆದರು.

ನನಗೆ ಸಹಿಸಲಿಲ್ಲ, "ಮೊನ್ನೆ ನಮ್ಮೂರಿಗೆ ಒಬ್ಬರು ಒಂದು ಮಗುವನ್ನ ತಂದಿದ್ದರು, ಬಿದಿರಿನ ತೊಟ್ಟಿಲಲ್ಲಿ. ಸಾಕ್ಷಾತ್ ಗಿಣಿ, ಆ ಮಗು! ಯಾರೂ ಹೇಳಿಕೊಡದ ಕೀರ್ತನೆ ಹಾಡುತ್ತ ತೊಟ್ಟಿಲಲ್ಲೇ ಮಲಗಿಕೊಂಡು ಕಾಲಕ್ಷೇಪ ಮಾಡುತ್ತಿತ್ತು...." ಅಂದೆ.

" ಸರಿ, ಬಿಡಿ! " ಅಂದರವರು.

" ಬಿಡುವುದೇನು? ನಿಮ್ಮ ಚೀಚ್ಚುವಿಗಿಂತ ಚಿಕ್ಕದಾಗಿಯೇ ಇರಬೇಕು ಆ ಗಿಣಿ! ಬಟ್ಟೆ ಚೀಪುತ್ತಲೇ 'ಏಕಾದಶಿ ಮಹಾತ್ಮ್ಯ' ಅಂತ ರುಕ್ಮಾಂಗದನ ಕಥೇನ ಕೀರ್ತನೆ ಮಾಡುತ್ತಿತ್ತು" ಅಂದೆ.

" ಹರಿಕಥೆ ಶಿವಕಥೆ ಮಾಡಬಹುದು, ಏಕಾದಶೀನೂ ಆಗಬಹುದು.... ಆದರೆ, ರಾಜರ ಹೆಸರುಗಳನ್ನ....ನಮ್ಮ ಚೀಚ್ಚುವಿನ ಹಾಗೆ...." ಅಂದರು, ತಂದೆಯವರು, ಪುತ್ರನ ಮೇಲಿನ ಕುರುಡು ವ್ಯಾಮೋಹದಿಂದ.

ಆದರೆ, ನಾನು ನಿಲ್ಲಿಸಲಿಲ್ಲ. " ನೋಡಿ ಸ್ವಾಮಿ, ನೀಲಾಂಬರಿ ರಾಗ ಅಂತ ಕೇಳಿಲ್ಲವೇ ನೀವು? ಅದನ್ನ ಮೊದಲು ಹಾಡಿದ್ದು ಒಂದು ಸಣ್ಣ ಹೆಣ್ಣು ಕೂಸು. ಎರಡು ತಿಂಗಳ ಮಗು! ನೀಲಿ ಲಂಗ ತೊಡಿಸಿದ್ದರಂತೆ ಅವತ್ತು.... ಆ ಮಗುವಿಗೆ...." ಎಂದೆ.

" ಹಾಳಾಗಿ ಹೋಯಿತು .... ಹಾಳಾಗಿ ಹೋಯಿತು " ಅಂತ ಗೊಣಗುತ್ತಾ ಅವರು ಮೂಲೆಯಲ್ಲೇ ಆಚೆಗೆ ತಿರುಗಿಕೊಂಡು ಕುಳಿತರು.

ನಾನು ನಿರಾತಂಕವಾಗಿ ಪ್ರಯಾಣವನ್ನು ಮುಂದುವರಿಸಿದೆ.

---

*



# ಎಂಟಾಣೆ



ನನಗೆ ಈಗ ಇಪ್ಪತ್ತೆರಡು ವರ್ಷ. ಅಗಲ ಎತ್ತರ ಸುತ್ತಳತೆ ಎಲ್ಲವೂ ನಮ್ಮ ದೇಶದ ದರಿದ್ರ ನಾರಾಯಣರ ಮಟ್ಟಕ್ಕಿಂತ ಮೂರು ಪಾಲು ಹೆಚ್ಚು. ಕಡಿದರೆ ನಾಲ್ಕಾಳು. ಅಲಂಕಾರ ಪೂರ್ತಿಯಾದರೆ ನನ್ನನ್ನ ಪಠಾಣ ಎಂದೇ ಭಾವಿಸುವರು ತಿಳಿಯದ ಜನ. ಆದರೂ, ಕೇವಲ ನಾಲ್ಕು ವರ್ಷದ ಮಗುವಿನ ಹಾಗೆ ನನಗೆ ಆಟದಲ್ಲೇ ಅಕ್ಕರೆ ಜಾಸ್ತಿ. ಆಟ ಎಂದರೆ ಕ್ರಿಕೆಟ್ ಟೆನ್ನಿಸ್‌ಗಳಲ್ಲ; ಕೇವಲ ಸಣ್ಣಮಕ್ಕಳೊಂದಿಗೆ ಕಣ್ಣಮುಚ್ಚಾಲೆ, ಕೋಲುಕುದುರೆ, ಕಳ್ಳಪೋಲೀಸ್, ಗುಡುಗುಡುಗುಡು, ಇತ್ಯಾದಿ ಗುಲ್ಗೋರಿಯಾಗಳು. ಸಮವಯಸ್ಕರೊಂದಿಗೂ ದೊಡ್ಡವರೊಂದಿಗೂ ಆಡುವುದೆಂದರೆ ನನಗಾಗದು. ನನ್ನ ಮನೋಬುದ್ಧಿಗಳು ಮಗುತನದ ಮಟ್ಟಕ್ಕಿಂತ ಮೇಲಕ್ಕೆ ಏರಲೇ ಇಲ್ಲ ಎಂದು ತೋರುತ್ತೆ. ಮನಶ್ಶಾಸ್ತ್ರಜ್ಞರನ್ನ ವಿಚಾರಿಸಬೇಕು.

ನನ್ನ ತಂಗಿ ಸುಬ್ಬಿಗೆ ಒಂದು ಮಗು ಇದೆ. ಮಾಚ್ಚಿ ಅಂತಾರೆ ಅದನ್ನ, ಮಹಾಲಕ್ಷ್ಮಿ ಅನ್ನುವುದಕ್ಕೆ ಬಾಯಿಬರದೆ ಇರುವುದರಿಂದ. ಅದರ ಜೊತೆ ಆಡುವುದಕ್ಕೆ ಬಾರೋ ಎಂದು ಮೂರು ಹೊತ್ತು ಸುಬ್ಬಿ ನನಗೆ ಹೇಳಿ ಕಳುಹಿಸುತ್ತಲೇ ಇರುತ್ತಾಳೆ. ಕಾಲೇಜು ಓದುಗಾರಿಕೆಯ ಗೋಷ್ಠಿ ವ್ಯಸನಗಳನ್ನೆಲ್ಲ ಮರೆಯಬಹುದಲ್ಲ ಎಂದು ನಾನೂ ಕರೆ ಬಂದಾಗಲೆಲ್ಲ ತಪ್ಪದೆ ಹೋಗಿ ಮಾಚ್ಚಿ ಸಂಗಡ ಆಡುವೆ.

ಇದೇನಿದು? ಈ ಧಡಿಯ ಕಾಲೇಜು ಮೆಟ್ಟಲು ಹತ್ತಿದನೇ ಎಂದು ನೀವು ಮೂಗಿನ ಮೇಲೆ ಬೆರಳಿಡಬೇಡಿ. ನೋಡಿ! ಇಷ್ಟೆಲ್ಲ ಪರೀಕ್ಷೆಗಳು, ಪ್ರಶ್ನೆಗಳು, ಫಲಿತಾಂಶಗಳು, ಶೇಕಡಾಗಳು, ಬೋರ್ಡುಗಳು ಇದ್ದರೂ

ಕೂಡ ನನ್ನಂಥ ಶಿಶುಜೀವಿ ಬಿ. ಎ. ತರಗತಿಗೆ ಬಂದಿದ್ದೇನೆ, ಭೂಷ! .... ಇರಲಿ! ಆ ವಿಷಯ ಇಲ್ಲಿ ಅಪ್ರಕೃತ.

ಸುಬ್ಬಿ ಮನೆಗೆ ಹೋಗಿ ಚಹ ತೀರಿಸುವದರೊಳಗೆ ಅವರಿಬ್ಬರೂ, ಸತಿಪತಿಯರು, ಸಿನಿಮಾಗೆ ಹೊರಡುವರು. ಮಾಚ್ಚಿ ಭಾರ ನನ್ನ ಭುಜದ ಮೇಲೆ. ನಾನೂ ಮಾಚ್ಚೀನೂ ಸ್ನಾನ ಮಾಡಿ, ಮಡಿ ಉಟ್ಟು ದೇವಸ್ಥಾನಕ್ಕೆ ಹೋಗಿ ಅಡಿಗೆ ಮಾಡಿ ಊಟ ಮುಗಿಸಿ ಅರಸಿನದ ಪೊಟ್ಟಣ ಕಟ್ಟಿ ಆರತಿ ಎತ್ತಿಸಿಕೊಳ್ಳುವುದರೊಳಗೆ ಸುಬ್ಬಿ ಬರುವ ಹೊತ್ತಾಗುವುದು. ಭಾವ ನನ್ನ ಮುಂಗುರುಳು ಸರಿಪಡಿಸಿ, “ ಹೋಗಿ ಬಿಟ್ಟು ಬರುತ್ತೀಯಾ? ಗೋಪು ! ” ಅನ್ನುವನು.

ಒಂದು ದಿನ ಸುಬ್ಬಿ ನನ್ನನ್ನ ಕರೆದು, “ ಗೋಪಿ! ಒಂದು ಶಿಶು ವಿಹಾರ ಪ್ರಾರಂಭಿಸೋ ! ಮನೆ ಮುಂದೆ ಒಂದಿಷ್ಟು ಮರಳುಗುಡ್ಡೆ ಹಾಕಿ ಎರಡು ಹಳೇ ಮೋಟಾರ್ ಟೈರ್ ನೇತಾಡಿಸಿದರಾಯಿತು. ತಿಂಗಳಿಗೆ ಹತ್ತಿಪ್ಪತ್ತು ಸಂಪಾದನೆ! ” ಅಂದಳು. ಏನ್ಮಾಡಿದರೂ ಸಹೋದರಿ. ಬಿ. ಎ. ನೂ ಹೋಗಿತ್ತು. ಯೋಚನಾತರಂಗಗಳು ಅಂತರಂಗದಲ್ಲಿ ಎದ್ದು ಕುಣಿದುವು ಎಂದು ಮುಂತಾಗಿ ಹೇಳುತ್ತಾರಲ್ಲಾ ಹಾಗಾಯಿತು ನನಗೆ. “ ಓದು ತಲೆಗೆ ಹತ್ತೋದಿಲ್ಲ ಅಂತೀಯಾ. ನಾಲ್ಕು ಮಕ್ಕಳನ್ನು ಸೇರಿಸಿ ಆಟ ಆಡಿಸು ” ಅಂದಳು. ಕೊಡೆಯನ್ನು ಕೊಂಕುಳಿಗೇರಿಸುತ ಬಾಗಿಲು ಸಂದಲ್ಲಿ ಚಪ್ಪಲಿ ಹುಡುಕಿದೆ.

ದಾರಿಯುದ್ದಕ್ಕೂ ಸುಬ್ಬಿಯ ಸೂಚನೆ ಕಿವಿಗಳೆರಡರಲ್ಲೂ ಗುಂಗುಗಾನ ಮಾಡಿತು. ಮರಳಿನ ಮೇಲೆ ಮಕ್ಕಳ ಶಾಲೆ ಏಳುವುದೇ? ಅನುಮಾನ ಆವರಿಸಿತು. ತಲೆ ನೋವು ಬಂತು. ಪ್ರತಿಭೆಗಾಗಿ ಪ್ರಾರ್ಥನೆ ಮಾಡುತ್ತ ಮನೆ ಮುಂದಿನ ವರಾಂಡಾದಲ್ಲಿ ಮಂದಳಿಗೆ ಹಾಸಿ ಮಲಗಿದೆ.

ಬಂತು, ಸುಬ್ಬಿ ಹೇಳಿದ್ದಲ್ಲ....ಇನ್ನೊಂದು ! ಅಮ್ಮನನ್ನು ಪುಸಲಾಯಿಸಿ ಮೂರು ರೂಪಾಯಿ ಸಾಲ ಪಡೆದು, “ ಬಿಡಿಬಿಡಿ” ಎಂಬ ನಮ್ಮೂರು ಪತ್ರಿಕೆಯಲ್ಲಿ ಒಂದು ಜಾಹಿರಾತು ಹಾಕಿಸಿದೆ.

ಮರುದಿನವೇ ಟಪಾಲಿನವರು ಮನೆ ಬಾಗಿಲಿಗೆ ಬಂದರು. "ಇದೇ ತಾನೆ ತಾಪತ್ರಯದ ಮನೆ?" ಎಂದು ವಿಚಾರಿಸಿದರು. "ಚಿಂತೆ ಇಲ್ಲ, ನಾಲ್ಕಾಣೆಯಾದರೂ ಸಿಕ್ಕೀತು!" ಎಂದು ಹಿಗ್ಗಿದೆ. ಲಕ್ಕೋಟೆ ಹರಿದು ಒಳಗಿನ ಕಾಗದ ತೆಗಿದಾಗ ಕೈ ನಡುಗಿತು. ಓದಿದಾಗ ರೋಮಾಂಚ ವಾಯಿತು. ಯಾರೋ ಅಪರಿಚಿತರು. ಆದರೇನು? ಇನಾಮುದಾರು. ಒಳ್ಳೆ ಯದೇ ಆಯಿತು. ಒಂದೇ ಒಂದು ಮಗು, ಗಂಡು; ಕೂಸು ಎಂಬುದೇ ನಾಮಧೇಯ; ಮೂರು ವರ್ಷ ಎಂಟು ತಿಂಗಳು; ಶ್ರವಣ ನಕ್ಷತ್ರ; ಮಕರ ರಾಶಿ; ಸಂಜೆ ಐದರಿಂದ ಏಳರ ವರೆಗೆ!

ಅಡಿಗೆಮನೆ ಮೂಲೆಯಲ್ಲಿ ಅಮ್ಮ ಕೂಡಿಹಾಕಿದ್ದ ಖಾಲಿ ಬೆಂಕಿ ಪೊಟ್ಟಣಗಳು ಹನ್ನೆರಡು ಸಹಿತ ಅವರ ಮನೆಗೆ ಹೋಗಿ ಕೂಸಿನ ಪಕ್ಕದಲ್ಲೇ ಕುಳಿತೆ. ಮೂರು ವರ್ಷದ ಮಗು ಅಷ್ಟು ಬೆಳೆದು ಬಸವನ ಹಾಗಿರುತ್ತೆ ಎಂದು ನಾನು ಭಾವಿಸಿರಲಿಲ್ಲ. ಪೊಟ್ಟಣದ ಪೆಟ್ಟಿಗೆಗಳನ್ನು ಎತ್ತರಿಸಿ ಒಂದು ಮನೆ ಕಟ್ಟಿದೆ. ಸಾಲಾಗಿ ನೆಲದ ಮೇಲಿರಿಸಿ 'ರೈಲು' ಎಂದು ನೂಕಿದೆ. ಕೂಸಿಗೆ ರುಚಿಸಲಿಲ್ಲ. ಬೆನ್ನಮೇಲೆ ಕೂರಿಸಿಕೊಂಡೆ. ಅತ್ತಲಿಂದತ್ತಲು ಓಡಾಡಿದೆ. ಹಿಮ್ಮಡಿಯಿಂದ ಹುಡುಗ ಪಕ್ಕೆಗಳನ್ನು ತಿವಿದ. ಇಳಿಸಿ,

ತೋಟಕ್ಕೆ ಕರೆದುಕೊಂಡು ಹೋದೆ. ಅವನ ತಂದೆ ತಾಯಿಗಳು ಆಗಲೇ ಏನೇನೋ ದುರಭ್ಯಾಸಗಳನ್ನು ಕಲಿಸಿಬಿಟ್ಟಿದ್ದರು. ತಲೆ ಮೇಲೆ ಕೂರಿಸಿಕೊಂಡು, "ಮಾವಿನ ಹಣ್ಣು ಬೇಕೆ? ಮಾವಿನ ಹಣ್ಣು!" ಎಂದು ಸುತ್ತಾಡಿದೆ. ಆ ತುಂಟನೋ ಕಿವಿಹಿಡಿದೆಳೆಯುತ್ತಿದ್ದ. ಹುಡುಗನ ವಯಸ್ಸು ಮೂರಲ್ಲ, ಮೂವತ್ತಿರಬಹುದೆಂದು ತೋರಿತು. ಬಲು ತೂಕ! ಕಬ್ಬಿಣದ ಕಡಲೆಯನ್ನೇ ಬೇಯಿಸಿ ತಿನ್ನಿಸುತ್ತಾರೋ ಏನೋ? ಮಕರ ರಾಶಿಯಲ್ಲ, ವೃಷಭ ರಾಶಿಯೇ ಇರಬೇಕೆನಿಸಿತು.

ಸದ್ಯಕ್ಕೆ ಏಳು ಹೊಡೆಯಿತು. ಕೂಸನ್ನಿಳಿಸಿ ಬೆವರೊರಸಿಕೊಂಡೆ. ಇನ್ನುಮೇಲೆ ಆ ಹೊಸಲು ದಾಟುವದಿಲ್ಲವೆಂದು ಸಂಕಲ್ಪಿಸಿದೆ. ಸಬೂಬಿಲ್ಲದೆ ಎಂಟಾಣೆ ಕೊಟ್ಟರು. "ಬರಬರುತ್ತಾ ಬಂಗಾರವಾಗಲಿ! ಇದನ್ನ ಈಗಲೇ ತೆಗೆದುಕೊಂಡು ಅಮ್ಮನ ಕೈಲಿಟ್ಟು ನಮಸ್ಕಾರ ಮಾಡಬೇಕು" ಎಂದು ಯೋಚಿಸಿದೆ.

ಆಗ 'ಕೂಸು' ಓಡಿಬಂದು ಗಬಕ್ಕನೆ ಎಂಟಾಣೆಯನ್ನು ಕಸಿದುಕೊಂಡು ಕುಣಿದಾಡಿತು. 'ಯಾಕೊ?' ಎಂದು ನಾನು ಹೆದರಿಸಿದಾಗ, 'ನಿನ್ನಂಥ' ಧಾಂಡಿಗನನ್ನ ಆಟ ಆಡಿಸಿದ್ದಕ್ಕೆ ನನಗೆ ಎಂಟಾಣೆ ಬೇಡವೇನು?' ಎಂದು ಹೇಳಿತು.

ಕಾಸು ಹಿಂದಕ್ಕೆ ಬರಲೇ ಇಲ್ಲ. ಕೊಡೆಯನ್ನು ಕೊಂಕುಳಿಗೇರಿಸಿದೆ. ಚಪ್ಪಲಿಗಳನ್ನು ಅಲ್ಲೇ ಬಿಟ್ಟೆ. ಹುಡುಕಿ ತರಲು ತಾಳ್ಮೆ ಇರಲಿಲ್ಲ.

---

# ಕೀಲಿ ಕೈ



(ಹೆಣ್ಣೀ ಹೇಳಿದ್ದು)

ಮೊನ್ನೆ ಬೆಳಗ್ಗೆ ಕೀಲಿಕೈ ಗೊಂಚಲು ಇದ್ದಕಿದ್ದ ಹಾಗೆ ಮಂಗ ಮಾಯ! ಒಟ್ಟು ಆರು ಬೀಗದ ಕೈಗಳು! ಮುಂಜಾನೆ ಎದ್ದವರು ಸೊಗ ಸಾದ ಒಂದು ಸಣ್ಣ ಕತೆ ತಲೆಯೊಳಗೆ ಮೂಡಿ ಬರುತ್ತಾ ಇದೆ, ಕಾಫಿ ಕುಡಿದು ಕೂತು ಬರೆದೇ ಬಿಡುತ್ತೇನೆ, ಎಂದು ಹೇಳುತ್ತಿದ್ದರು. ಅವರ ಪೆನ್ನು ಮೇಜಿನ ಡ್ರಾಯರೊಳಗೆ! ಅದಕ್ಕೆ ಕಾಗದ ಬೀರುವಿನಲ್ಲಿ! ಕೊಂಚ ತಡೀರಿ, ಹುಡುಕಿ ಕೊಡುತ್ತೇನೆ ಎಂದರೆ, ಕಾವೆಲ್ಲ ಆರಿಹೋದ ಮೇಲೆ ಕಾವ್ಯ ಹೇಗೆ ಬರೆಯೋದು ಎಂದು ಎಗರಾಡುತ್ತಾರೆ. ಒಳ್ಳೇ ಕಷ್ಟಕ್ಕಿಟ್ಟು ಕೊಂಡಿತಲ್ಲಾ ಎಂದು ನಾನು ಎಲ್ಲೆಲ್ಲೋ ಹುಡುಕಿದೆ. ಕೈಗೆ ಯಾವು ದಾದರೂ ಕಾದಂಬರಿ ಕೊಟ್ಟು 'ಇದನ್ನ ಓದುತ್ತಾ ಇರಿ' ಎಂದು ಹೇಳೋಣ ವೆಂದರೆ, ಅವೆಲ್ಲ ಬೀರುವಿನಲ್ಲೇ ಇವೆ. ಬೀರು ಬೀಗದ ಕೈ, ಗೊಂಚಲಲ್ಲೇ! ಪ್ರತಿ ಕೀಲಿ ಕೈಯನ್ನೂ ಬೇರೆಬೇರೆಯಾಗಿಯೇ ಇರಿಸುವುದೇ ಬುದ್ಧಿವಂತರ ಲಕ್ಷಣ ಎಂದು ಆಗ ನಾನು ತಿಳಿದೆ. ಭದ್ರವಾಗಿ ಬೀರುವಿನೊಳಗೆ ಕುಳಿತು ಕಾರಂತ ಗೋಕಾಕ ಗೊರುರು ಜಡಭರತ ಮುಂತಾದವರು ನನ್ನ ಪೇಚಾ ಟವನ್ನು ನೋಡಿ ನಗುತ್ತಿದ್ದರು. ತಪ್ಪನ್ನ ನಾನೇ ಹೊರುವುದಕ್ಕಿಂತ ಅವರ ತಲೆಗೆ ಹಾಕುವುದೇ ಸರಿಯಾದ ಉಪಾಯ ಎಂದು ನಿರ್ಧರಿಸಿದೆ. ಅಷ್ಟು ಹೊತ್ತಿಗೆ ಸರಿಯಾಗಿ ಅವರೇ ಬಂದರು ಒಳಕ್ಕೆ.

"ಬೀಗದ ಕೈ ಗೊಂಚಲೆಲ್ಲಿ? ತನ್ನಿ, ಇಲ್ಲಿ!"

"ಕೊಟ್ಟೆನಲ್ಲೆ, ನಿನ್ನೇನೆ! ಊಟಕ್ಕೆ ಮೊದಲೇ....ನಿನ್ನ ಕೈಯ್ಯಲ್ಲೇ ........"

"ಸುಳ್ಳು!"

" ಸುಳ್ಳು ! " ಯಾರಿಗೆ ಹೇಳುವ ಮಾತಿದು ? ಯಾಕೆ ? ನೆನಪು ಮಾಡಿಕೊ ! ಯಾವುದನ್ನ ಕಡೆಗೆ ತೆರೆದೆ ನೀನು ? ಬೀರೂನೇ ? ಪೆಟ್ಟಿಗೇನೆ? ಎಲ್ಲೆಲ್ಲಿ ಹೋಗಿದ್ದಿ ಅವನ್ನ ಹಿಡಿದುಕೊಂಡು ? "

" ನಾನೆಲ್ಲೆಲ್ಲಿಗೆ ಹೋಗುತ್ತೇನೆ ? ನೀವು ತಾನೆ ಎದುರು ಮನೆಗೆ ಇಸ್ಪೀಟಿಗೆ ನುಗ್ಗಿದ್ದು ? "

" ಇಸ್ಪೀಟಿನ ಮಾತು ತೆಗಿಯುದೇ ನಿನ್ನ ಹತ್ರ ಬೇರೆ ವಿಷಯವನ್ನೇ ಚರ್ಚೆ ಮಾಡುವ ಹಾಗಿಲ್ಲ....ಥತ್ "

ನನ್ನ ಸಹನೆ ಮೀರಿತು....ನನ್ನ ಮನೆ ಅಚ್ಚುಕಟ್ಟು ಅಂದರೆ ಸುತ್ತ ಹತ್ತು ಮನೆಯವರಿಗೆಲ್ಲ ಆಶ್ಚರ್ಯ ! ಅಡಿಗೆಮನೆ ಉಗ್ರಾಣ ಆಫೀಸ್ ರೂಮು ದೇವರ ಕೋಣೆ ಎಲ್ಲಿ ಯಾವುದು ಕೇಳುತ್ತೀರಿ ಕಣ್ಣು ಕಟ್ಟಿದರೂ ಕೂಡ ನೆಟ್ಟಗೆ ಹೋಗಿ ತಡಕಾಡದೆ ತಂದುಕೊಡಬಹುದು ನನ್ನ ಮನೆಯಲ್ಲಿ. ಅವರ ಮೇಜಿನ ಮೇಲೆ ಮಾತ್ರ ಕೋಳಿ ಕೆದರಿದ ಹಾಗೆ ಬಿದ್ದಿರುತ್ತೆ, ತುಂಡು ಪದ್ಯಗಳು, ಖಂಡ ಕಾವ್ಯಗಳು, ರಗಳೆ ಚೂರುಗಳು, ಸಣ್ಣ ಕತೆ ಗಳು....ಆದರೆ, ನಾನು ಯಾವುದನ್ನೂ ನನ್ನ ಪಾಲಾಗಿ ಕಳೆದಿರಲಿಲ್ಲ. ಆದ್ದ ರಿಂದ, ಅವರ ಅವ್ಯವಸ್ಥೆಯೇ ಈ ಅನಾಹುತಕ್ಕೆ ಕಾರಣವೆಂದು ನಾನು ನಿಶ್ಚಯಿಸಿದೆ.

" ನೀವೇ ಕಳೆದಿದೀರಿ, ನನಗೆ ಗೊತ್ತು ಅಂದೆ. "

" ಹೌದು, ಹೌದು."

" ಹೌದೇನು ? ನೀವೇ ! ನಾನಿದುವರೆಗೂ ಒಂದು ಪದಾರ್ಥ ಕಳೆ ದಿಲ್ಲ ಈ ಮನೇಲಿ. "

" ಕಳೆಯದೆ ಏನು ? ಮೊನ್ನೆ ನನ್ನ ಷರ್ಟಿನ ಗುಂಡಿ ? "

" ಅದು ನನ್ನ ತಪ್ಪೇನು ? ಓ ಹೋ ಹೋ ! "

" ಓ ಹೋ ಹೋ, ಅಂದ್ರೆ ? "

" ಓ ಹೋ ಹೋ ಅಂದ್ರೆ ಓ ಹೋ ಹೋ ಅಂತ, ಗೊತ್ತಿಲ್ಲವೇನು?"

" ಲಕ್ಷಣವಾಗಿದೆ. "

" ನನ್ನ ಲಕ್ಷಣ ಸಾಲದೆ ಇದ್ದರೆ ಇನ್ನೊಂದನ್ನ ತರಬಹುದಲ್ಲಾ ! "

ಸರಿ! ನನಗೆ ಅಳು ಬಂತು. ನಾವಿಬ್ಬರೂ ಮಾತು ಬಿಟ್ಟೆವು. ನನ್ನ ಹಟ ನಾನೂ ಸಾಧಿಸಿದೆ. ಅವರನ್ನ ಅಡಿಗೆಮನೆ ಹತ್ತಿರ ಸುಳಿಯಗೊಡಲಿಲ್ಲ. ಪಕ್ಕದ ಮನೆ ಲಿಲ್ಲೀನ ಕರೆದು ಅವಳ ಕೈಲೇ ಅವರ ಕೋಣೆಗೆ ಕಾಫಿ ಕಳುಹಿಸಿದೆ. "ಸ್ನಾನಕ್ಕೆ ನೀರು ಇಟ್ಟಿದೆ" ಎಂದು ಅವಳೇ ಹೋಗಿ ಹೇಳಿದಳು. ಊಟಕ್ಕೆ ಬಡಿಸುವಾಗ ನಾನು ತುಟಿ ತೆರೆಯಲೇ ಇಲ್ಲ. ಬಸ್ ಚಾರ್ಜಿಗೆ ಅಂತ ಮೇಜಿನ ಮೇಲೆ ಮೂರಾಣೆ ಇಟ್ಟಿದ್ದೆ. ಆಫೀಸಿಗೆ ಹೊರಡುವಾಗ "ಓಹೋಹೋ" ಎಂದು ವಿಕಟವಾಗಿ ಆರ್ಭಟಿಸುತ್ತ ಬಾಗಿಲು ದಾಟಿದರು. ನಾನೂ ಓಹೋಹೋ ಅಂದೆ!

ರಾತ್ರಿ ನನ್ನ ಹಾಸಿಗೆಯನ್ನ ಬಾಗಿಲಿಂದೀಚೆಗೆ ಹಾಸಿಕೊಂಡೆ. ಅವರು ಮಂಚದ ಮೇಲೆಯೇ ಬಿದ್ದುಕೊಂಡು "ತ್ಸ....ತ್ಸ....ತ್ಸ" ಎಂದು ಲೊಚಗುಟ್ಟಿದರು. "ಉಶ್ಯಪ್ಪಾ" ಎಂದು ಒದ್ದಾಡಿದರು. ಎರಡು ಮೂರು ಸಾರಿ 'ದೇವರೇ!' ಎಂದರು. ನಾನು ಸದ್ದುಮಾಡಲೇ ಇಲ್ಲ. ಮೊಸಳೆಯಹಾಗೆ ತೆಪ್ಪಗೆ ಬಿದ್ದಿದ್ದೆ. ಮೈ ಮುಟ್ಟಿದರೆ ರೇಗಿ ಬೀಳೋಣ ಅಂತ ಕಾದಿದ್ದೆ. ಸದ್ಯಕ್ಕೆ ಅಲ್ಲೇ ಹಾಗೆಯೇ ನಿದ್ದೆ ಹೋದರು. ಅವರೂ ಸೋಲಲಿಲ್ಲ; ನಾನೂ ಗೆಲ್ಲಲು ಅವಕಾಶಕೊಡಲಿಲ್ಲ.

ನಿನ್ನೆ ರಾತ್ರಿಯೂ ಹೀಗೆಯೇ ನಡೆಯಿತು. ಈ ಬೆಳಗ್ಗೆ ನನಗೆ 'ಅಯ್ಯೋ' ಎನಿಸಿತು. ಪ್ರಾಣಿ ಎಷ್ಟು ಸಂಕಟಪಡುತ್ತದೆ ಎಂದು ಮನ ನೊಂದಿತು. ಒಂದೇ ನೊಗಕ್ಕೆ ಹೆಗಲುಕೊಟ್ಟ ಗಂಡಹೆಂಡಿರಲ್ಲವೇ, ಎಂದೆನಿಸಿತು. ನನ್ನದೇ ತಪ್ಪು ಎಂದು ಒಪ್ಪುವಂತಾಯಿತು; ಆದರೂ, ಬಿಗುಮಾನ ಎಂಬುದೊಂದಿದೆಯಲ್ಲಾ ಮನುಷ್ಯನಿಗೆ, ಉಪ್ಪು, ಹುಳಿ, ಖಾರ ತಿಂಬುವವರೆಗೂ! ಅವರೇ ಮೊದಲು ಮಾತನಾಡಿಸಲಿ ಎಂದು ಕಾದೆ.

ಸಂಜೆ ಆಫೀಸಿನಿಂದ ಕೊಂಚ ಮುಂಚೆಯೇ ಬಂದರು. ಹಲ್ಲುಗಳೆಲ್ಲವನ್ನೂ ಹೊರಕ್ಕೆ ಕಾಣಿಸಿಕೊಂಡೇ ಚಿತ್ರೈಸಿದರು. ಅದರ ಅರ್ಥ ನನಗೆ ತಿಳಿಯದೆ ಇಲ್ಲ. ಆದರೂ, ಸರಕ್ಕನೆ ನಾನು ಓಡಿಹೋಗಿ ಒಂದು ಮುಂದಳಿಗೆಯ ಮೇಲೆ ಒರಗಿದೆ. ಹತ್ತಿರಕ್ಕೆ ಧಾವಿಸಿದರು. ಸರೋಜಾ, ಸರೋಜಾ, ಸರೋಜಾ ಎಂದು ಅಂಗಲಾಚಿದರು. ಕ್ಷಮಿಸು ಸರೋಜಾ ಎಂದು ಬಿಕ್ಕಿದರು. "ಬೀಗದ ಕೈ ಗೊಂಚಲು ನನ್ನ ಅಂಗಿ ಕಿಸೆಯೊಳಗೇನೆ ಇತ್ತು ಕಣೆ! ಅನ್ಯಾಯವಾಗಿ ನಿನ್ನನ್ನ ದೂರಿದೆನಲ್ಲಾ, ನೀನೇನು ಶಿಕ್ಷೆ

ಬೇಕಾದರೂ ವಿಧಿಸು, ಅನುಭವಿಸುತ್ತೇನೆ! ಸರೋಜಾ, ಸರೋಜಾ!" ಎಂದು ನನ್ನನ್ನ ಅಲುಗಾಡಿಸಿದರು.

ಎಷ್ಟಾದರೂ ನನ್ನದು ಹೆಂಗರುಳು! ಎದ್ದು ಅವರನ್ನೇ ನೋಡುತ್ತಾ ಕುಳಿತೆ. "ನನ್ನ ತಪ್ಪಿಗೆ ನಿಮ್ಮನ್ನೇನು ಕ್ಷಮಿಸುವುದು?" ಎಂದೆ. ಅವರು ನನ್ನ ಕಣ್ಣನೀರನ್ನೊರಸುತ್ತಾ "ನಿನ್ನದೇನು ತಪ್ಪು? ನನ್ನದೇ ತಪ್ಪು! ನನ್ನ ಕಿಸೆಯೊಳಗೆ ಬಿದ್ದಿತ್ತು ಬೀಗದ ಕೈ ಗೊಂಚಲು.... ನಾನು ಸರಿಯಾಗಿ ಸಂಶೋಧನೆ ನಡೆಸಿದ್ದರೆ...." ಎಂದರು. ಆಗ ನಾನು, "ಇಲ್ಲ! ಇಲ್ಲ! ಅಡಿಗೆಮನೆ ಸಾಸುವೆ ಡಬ್ಬದಲ್ಲಿತ್ತು.... ನಾನೇ ಇವತ್ತು ಬೆಳಗ್ಗೆ ನಿಮ್ಮ ಅಂಗಿ ಕಿಸೆಯೊಳಗಿರಿಸಿದ್ದು" ಎಂದೆ.

"ಓಹೋಹೋ" ಅಂದರು.

ನಾನು ಅಣಕಿಸಲಿಲ್ಲ. ಹಾಗೆಯೇ, ಮುಖ ತಗ್ಗಿಸಿ ಕುಳಿತುಬಿಟ್ಟೆ.

---

ಹೆಣ್ಣು ಹೆತ್ತವರ ಜೊಂಕು ೧೦

# ಅವಿವಾಹಿತರಿಗೊಂದೆಚ್ಚರಿಕೆ!

ಪ್ರಾಯದ ಹುಡುಗರೆಲ್ಲರಿಗೂ ಈಚೆಗೆ 'ಹೆಣ್ಣು ನೋಡುವ' ಅನುಭವ ಇದ್ದೇ ಇರುತ್ತದೆ. ಹೊಸಕನ್ನಡದ ಸಾಮಾಜಿಕ ಕಾದಂಬರಿಗಳಲ್ಲೂ ನಾಟಕಗಳಲ್ಲೂ ಕನ್ಯಾರ್ಥಿಯಾಗಿ ಬಂದವನೆದುರು ಹೆಣ್ಣನ್ನ ಕರೆತರುವ ದೃಶ್ಯವನ್ನು ನೂರಾರು ದೃಷ್ಟಿಕೋನಗಳಿಂದ ವರ್ಣಿಸಿದಾರೆ. ಅವುಗಳನ್ನೆಲ್ಲ ಸಂಗ್ರಹಿಸಿ ಒಂದು ಗ್ರಂಥ ಪ್ರಕಟಿಸಿ ಪ್ರಾಯದ ಹುಡುಗರಿಗೆಲ್ಲ ಹಂಚಿದರೆ "ಹೆಣ್ಣು ನೋಡುವ" ಸಂಘಟನೆಯನ್ನು ಅವರು ಅನಾಯಾಸವಾಗಿ ದಾಟಬಹುದೆಂದು ತೋರುತ್ತದೆ. ಹಾಗೆ ಮಾಡುವುದಾದರೆ, ನನ್ನ ಅನುಭವವನ್ನೂ ಸೇರಿಸಿಕೊಳ್ಳಬೇಕಾಗಿ ವಿನಂತಿ. ಹತ್ತಾರು ಕಡೆ ಆತಿಥ್ಯ, ಜಿಪುಣರು ಕೃಪಣರು

ನಿಪುಣರು ಮುಂತಾದವರ ಪರಿಚಯ, ಉಚಿತ ಪ್ರವಾಸ, ಚೊಕ್ಕ ಭೋಜನ, ಸಂಗೀತ ಶ್ರವಣ, ಇವೆಲ್ಲವೂ ನನ್ನ ನೆನಪನ್ನು ಸವಿಮಾಡಿವೆ. ಆದರೆ ನನಗಾದ ಒಂದು ಕಹಿ ಅನುಭವ ಮಾತ್ರ ಇತರರಿಗೆ ಆಗದಿರಲಿ ಎಂಬುದೇ ನನ್ನ ಪ್ರಾರ್ಥನೆ. ನನ್ನ ಗೆಳೆಯರಂತೆ ನಾನೂ ಭಾರಿ ಅಧಿಕಾರಿಗಳೊಬ್ಬರ ಮಗಳ ಕೈಹಿಡಿದು ಜೀವನನಾಟಕವನ್ನು ಕಡೆಯ ಅಂಕದ ತನಕ ಲೀಲಾ ಜಾಲವಾಗಿ ಜರುಗಿಸೋಣವೆಂದು ಕನಸು ಕಂಡಿದ್ದೆ. ಆದ್ದರಿಂದ ಹಾಸನ ದಿಂದ ವಿವಾಹ ದೂತರು ಬಂದು ರೈಲು ಚಾರ್ಜನ್ನು ನನ್ನ ಕೈಲಿಟ್ಟಾಗ ನಾನು ಆನಂದಪಟ್ಟೆ.

ಶ್ರೀಮಾನ್....ರ ಡ್ರಾಯಿಂಗ್ ರೂಂ ಸೋಫಾದಲ್ಲಿ ಕುಳಿತಾಗ ಸ್ವರ್ಗ ಸೋಫಾದಲ್ಲೇ ಕುಳಿತಷ್ಟು ತಂಪು ಏರಿತು. ಚಹ ಅಂದರೆ ಅಮೃತವೇ ಸರಿ! ಊಟಕ್ಕೆ ಶರತ್ ಚಂದ್ರ ಚಂದ್ರಿಕಾಧವಳಂ ದಧಿಃ! ಕಾಬೂಲು ದ್ರಾಕ್ಷಿ ಬೇರೆ ಎದ್ದು ಬಂದಕೂಡಲೇ, ಗೊಂಚಲುಃ ಗೊಂಚಲಾಗಿ, ಬೆಳ್ಳಿ ತಟ್ಟೆ ತುಂಬ. ನಾನೆಂದೂ ಅಂತಹ ಊಟ ಉಂಡಿರಲಿಲ್ಲ. ಚಿತ್ರದುರ್ಗ ದಾವಣಗೆರೆ ಗಳಲ್ಲಿ ನಾನೂ ಏಳೆಂಟು ಹೆಣ್ಣು ನೋಡಿದ್ದೆ. ಅವೆಲ್ಲ ಕೇವಲ "ಶಾಲಾ ಮಾಸ್ತರೀ ಮಕ್ಕಳು." ಹೆಚ್ಚೆಂದರೆ ತಾಲೋಕ್ ಆಫೀಸ್ ಹೆಡ್ ಗುಮಾಸ್ತೆ ಮಗಳೊಬ್ಬಳು. ಹಾಸನದಲ್ಲಿ ನನಗೆ ಗಟ್ಟಿಮೊಸರು ಕೊಡಿಸಿದವರು ಸಾಕ್ಷಾತ್....ದಾರರು! ನಾಲ್ಕು ಬಾಗಿಲಿಗೂ ನಾಲ್ಕು ಜವಾನರು. ಸೌದೆ ಒಡೆಯುವುದಕ್ಕೊಬ್ಬ, ಮಕ್ಕಳನ್ನಾಡಿಸುವುದಕ್ಕೆ ಆರು ಜನ, ಅಂತಹ ಭಾರಿ ಆಸಾಮಿ.

ಬೆಳಗ್ಗೆ ಹಾಸನ ಸೇರಿದವನು ಸಂಜೆ ಐದೂವರೆ ತನಕ "ಹೆಣ್ಣು ನೋಡಲೇ" ಇಲ್ಲ. ಉದ್ದಕ್ಕೂ ಆ ಅಧಿಕಾರಿಗಳ ಪ್ರತಾಪವನ್ನು ಕೇಳ ಬೇಕಾಯಿತು. ಅವರ ತಂದೆ ತಾತಂದಿರೆಲ್ಲರೂ ಬೇಲೂರು ಸಮೀಪದಲ್ಲಿ ದೊಡ್ಡ ದೊಡ್ಡ ಪ್ಲಾಂಟರುಗಳಂತೆ. ಎಸ್. ಎಸ್. ಎಲ್. ಸಿ., ಇಂಟರ್, ಬಿ. ಎ., ಮುಂತಾದ ಎಲ್ಲಾ ಪರೀಕ್ಷೆಗಳಲ್ಲೂ ಅವರದೇ ಅಂತೆ ಮೊದಲನೆಯ ನಂಬರು. ಏನೇನೋ ಬುರುಡೆ ಬಿಟ್ಟರು. ಗೋಡೆ ಮೇಲಿಂದ ಅವರ ತಾಯಿ ಫೋಟೋನ ಕೆಳಕ್ಕಿಳಿಸಿದರು. ಅವರ ಒಟ್ಟು ಕುಟುಂಬದ ಭಾವಚಿತ್ರವನ್ನು ತೋರಿಸಿದರು. "ಸರಸು ಇನ್ನೂ ಹುಟ್ಟಿರಲಿಲ್ಲ! ಈ ಫೋಟೋ ತೆಗೆದಾಗ!"

ಎಂದು ನಾಚಿಕೆಯಿಂದ ಒಪ್ಪಿಕೊಂಡರು. "ಚಿಂತೆ ಇಲ್ಲ! ಆಮೇಲೆ ಅದೂ ನಡೆಯಿತಲ್ಲ" ಅಂದೆ ನಾನು, ಸಮಾಧಾನಪಡಿಸುತ್ತಾ. "ಇದೇ ಅವಳ ಅಕ್ಕ! ಇದು, ಸೋಮು ನನ್ನ ಮೂರನೆಯ ಮೊಮ್ಮಗ. ಸರಸೂನ ನೀವು ನೋಡ ಬೇಕಾಗಿಯೇ ಇಲ್ಲ, ಅವಳ ಅಕ್ಕನ ಹಾಗೆಯೇ ಅವಳು, ಇದೇ ಸರಸು ಅಕ್ಕ ನೋಡಿ" ಅಂದರು. ಸರಸು ಅಕ್ಕನನ್ನು ಅವಳ ತಾಯಿ ಕೊಂಕುಳಲ್ಲಿ ಕೂರಿಸಿಕೊಂಡು ರಾಯರ ಹಿಂದೆ ನಿಂತಿದ್ದಳು. ಸರಸು ಅಕ್ಕನ ಬಾಯಲ್ಲಿ ರಬ್ಬರ್ ನಿಪ್ಪಲ್ ಬೇರೆ ಇತ್ತು.

"ಈಗ ಸರಸುವಿಗೆ ವಯಸ್ಸೆಷ್ಟು?" ಎಂದು ನಾನು ಧೈರ್ಯವಾಗಿ ಕೇಳಿದೆ. ಅದಕ್ಕವರು "ನೀವೇ ಲೆಕ್ಕ ಮಾಡಿ. ಇದನ್ನು ತೆಗೆದಾಗ ಅವಳ ಅಕ್ಕನಿಗೆ ಎರಡು ವರ್ಷ. ಅವಳಾದ ಮೇಲೆ ಶೀನು, ಶೀನುವಾದ ಮೇಲೆ ಬಾಲಿ, ಬಾಲಿಗೆ ಎರಡಾದಾಗ ಸರಸು, ಎರಡೆರಡು ವರ್ಷ ಲೆಕ್ಕಾಚಾರ. ಈಗ ಸರಸು ಅಕ್ಕನಿಗೆ ಇಪ್ಪತ್ತೆರಡು" ಅಂದರು. ಲೆಕ್ಕ ಅಂದರೆ ನನಗೆ ಮೊದಲಿಂದಲೂ ತಲೆಶೂಲೆ.

ಹಾಡು ಕೇಳಿಸುವುದಕ್ಕಾದರೂ ಹುಡುಗಿಯನ್ನು ತಂದು ಮುಂದೆ ಕೂರಿಸುತ್ತಾರೋ ಏನೋ ಎಂದು ನಾನು ಒಂದು ಪಿತೂರಿ ಹೂಡಿದೆ. "ಸರಸುವಿಗೆ ಹಾಡು ಕಲಿಸಿದೀರಾ?" ಅಂದೆ. ಅದಕ್ಕೆ ಅವರು ಒಂದು ಎದುರು-ಪಿತೂರಿ ಹೂಡಿ ನನ್ನನ್ನು ನಕಲಿಗೆ ಗುರಿಮಾಡಿದರು. "ಸರಸು ಹಾಡುತ್ತಾಳೆ. ಹೇಗೆ ಹಾಡುತ್ತಾಳೆ? ಚೆನ್ನಾಗಿ ಹಾಡುತ್ತಾಳೆಯೇ ಎಂಬ ಶಂಕೆಯೇ ಬೇಡಿ ನಿಮಗೆ. ನಾನೇ ಅವಳಿಗೆ ಸಂಗೀತ ಕಲಿಸಿದವನು. ನಮ್ಮ ಹಿರಿಯರು ಹೊಯ್ಸಳರ ಆಸ್ಥಾನದಲ್ಲಿ ವಿಷ್ಣುವರ್ಧನನ ಪಟ್ಟದರಸಿ ಶಾಂತಳಾದೇವಿಗೆ ವೀಣೆ ಕಲಿಸಿದರು" ಎಂದು ಹೇಳಿ ಅವರೇ ಒಳಕ್ಕೆ ಹೋಗಿ ಒಂದು ಹಳೇ ವೀಣೆ ಹಿಡಿದು ತಂದರು. ಠೊಯ್ ಠೊಯ್ ಅಂತ ಆ ಬಡ ತಂತಿಗಳನ್ನು ಹಿಡಿದೆಳೆದು ಪೀಡಿಸಿದರು. "ಇದು ಯಾವ ರಾಗ ಹೇಳಿ" ಎಂದು ನನ್ನನ್ನೇ ಕೇಳಿದರು. ರಾಗಜ್ಞಾನ ಕೊಂಚವೂ ಇಲ್ಲದ ನನಗೂ ಕೂಡ ಅದು 'ಕರ್ಕಶರಾಗ' ಅಂತ ಗೊತ್ತಾಗಿ ಹೋಯಿತು. "ನನಗಿಂತ ಸರಸು ಎಷ್ಟೋ ವಾಸಿ" ಅಂದರು.

ಕೊಂಚ ಹೊತ್ತಿನ ಮೇಲೆ ಅವರು ವೀಣೆಯನ್ನು ಕೆಳಕ್ಕಿರಿಸಿ ಬೆವರೊರಿಸಿಕೊಂಡು ನನ್ನ ಪಕ್ಕದಲ್ಲೇ ಸೋಫಾದಲ್ಲಿ ಕುಳಿತರು. ಶೀನು ಕೈಯ್ಯಲ್ಲಿ ನೀರು ತರಿಸಿ ಕುಡಿದರು. ಕೊಳೆ ವೈ! ಮಹರಾಯ ದೂರ ಕೂರಬಾರದೇ ಅನ್ನಿಸಿತು ನನಗೆ. ಅನಂತರ ನನಗೆ ಒಂದೇ ಉಸುರಿನಲ್ಲಿ ಹತ್ತಿಪ್ಪತ್ತು ಪ್ರಶ್ನೆಗಳನ್ನು ಹಾಕಿದರು. "ನಿಮ್ಮ ಊರು ಮಧುಗಿರಿ ಅಂತ ಹೇಳುತ್ತೀರಿ, ಆ ಹೆಸರು ಯಾಕೆ ಬಂತು ಆ ಊರಿಗೆ? ಆ ಗಿರಿ, ಭೂಶಾಸ್ತ್ರ ರೀತ್ಯಾ ಎಷ್ಟು ಹಳೆಯದು? ಅಲ್ಲಿನ ಕೋಟೆಯಲ್ಲಿ ಆಳಿದ ಅರಸರುಗಳು ವಿಜಯನಗರದ ಅರಸರುಗಳ ಮೇಲೆ ಯಾವ ಯಾವಾಗ ದಂಗೆ ಎದ್ದರು? ಮಧುಗಿರಿಯಲ್ಲಿ ದಾಳಿಂಬೆ ಗಿಡವನ್ನು ಮೊದಲು ನೆಟ್ಟವರು ಯಾರು? ದಾಳಿಂಬೆ ಸರಿಯೋ? ಮಾದಳ ಸರಿಯೋ? ಇಂಗ್ಲಿಷಿನಲ್ಲಿ ಅದಕ್ಕೆ ಏನು ಹೆಸರು? ಅದು ಯಾವ ಸಸ್ಯ ವಿಭಾಗಕ್ಕೆ ಸೇರಿದ್ದು? ಒಳಗೆ ಎಷ್ಟು ಮುತ್ತುಗಳಿವೆ ಎಂದು, ಹೊರಗಿಂದಲೇ ಎಣಿಸುವುದು ಸಾಧ್ಯವೇ? ಹೇಗೆ ಸಾಧ್ಯ? ದಾಳಿಂಬೆ ರಸಕ್ಕೂ ನಿಂಬೆ ರಸಕ್ಕೂ ರಾಸಾಯನಿಕ ವ್ಯತ್ಯಾಸವೇನು? ಇತ್ಯಾದಿ....ಇತ್ಯಾದಿ.....

ಕಡೆಗೆ ನಾನು ಸೋಫಾದಿಂದ ಎದ್ದೆ. "ಏನಿದು ?....ಎಂ. ಸಿ. ಎಸ್. ಪರೀಕ್ಷೆಯೋ?" ಎಂದೆ. ಅದಕ್ಕವರು "ಹೌದು! ಮಿಸಲಾ ಸರಸುವನ್ನ ನಿಮಗೆ ಕೊಟ್ಟರೆ, ನೀವು ಎಂ. ಸಿ.ಎಸ್ಸಿಗೆ ಕೂತುಕೊಳ್ಳಬೇಕಾಗುತ್ತದೆ. ಆಗ ಮಿಸಲಾ ನಿಮ್ಮನ್ನ ಇಂತಹ ಪ್ರಶ್ನೆಗಳನ್ನೇ ಕೇಳುತ್ತಾರೆ. ಆದ್ದರಿಂದ ನಿಮ್ಮ ಚೈತನ್ಯ ಎಷ್ಟು ಅಂತ ಈಗಲೇ ತಿಳಿದುಬಿಡೋಣ ಅಂತ ಇಷ್ಟೆಲ್ಲಾ ಕೇಳಿದೆ....ಈಗ ತಾವು ಹೊರಡಬಹುದು" ಅಂದರು. ಸರಸೂನ ಹೊರಕ್ಕೆ ತರಲೇ ಇಲ್ಲ!

ಆ ಸರಸುವಿಗೆ ಇನ್ನೂ ಮದುವೆಯಾಗಿಲ್ಲ! ನೀವೂ ಹುಷಾರಾಗಿರಿ. ಹಾಸನಕ್ಕೆ ನಿಮ್ಮನ್ನೂ ಕರೆಸಬಹುದು.

---

# ಸಭ್ಯ ಸಂತಾನ



ನಾರಾಯಣಯ್ಯನವರು ಮನೆಯಿಂದ ಹೊರಬಿದ್ದು ಅರ್ಧ ವಾಕಿಂಗ್ ಪೂರೈಸಿ ಗವಿಪುರದ ಮುನಿಸಿಪಲ್ ಪಾರ್ಕಿನ ಬಲಗಡೆ ಅಂಚಿನ ಕಲ್ಲು ಬೆಂಚಿನ ಮೇಲೆ ಕುಳಿತಮೇಲಲ್ಲದೆ ಸೂರ್ಯ ಅಸ್ತಮಿಸುವುದಿಲ್ಲ. ಮೊನ್ನೆ ತಾನೆ ಅವರು ಪೆನ್ಷನ್ ಪಡೆದರು; ಆದರೂ, ಹತ್ತು ವರ್ಷಗಳಿಂದ ಅವರು ಇದೇ ಅಭ್ಯಾಸವನ್ನು ಸೂರ್ಯನಿಗೆ ಕಲಿಸಿದಾರೆ. ದಿನಪತ್ರಿಕೆ ಕಚೇರಿಯಲ್ಲಿ ಅವರ ಚಾಕರಿ. ಸಂಜೆ ೫ ಗಂಟೆಗೆ ಪತ್ರಿಕೆ ಹೊರಬಿದ್ದರೆ, ನಾರಾಯಣಯ್ಯ ನವರೂ ಹೊರಬಿದ್ದು ನೆಟ್ಟಗೆ ಮನೆಗೆ ಬಂದು ಅಂಗಿ ಬಿಚ್ಚಿ ಶಾಲು ಹೊದ್ದು ವಾಕಿಂಗ್ ಹೊರಟುಬಿಡುವರು.

ಮೊನ್ನೆ ಅದೇ ಬೆಂಚಿನ ಮೇಲೆ ಶಂಭು ಶಾಸ್ತ್ರಿಗಳು ಕುಳಿತಿದ್ದರು. ಇಬ್ಬರಿಗೂ ಪರಸ್ಪರ ಪರಿಚಯವಿರಲಿಲ್ಲ. ಆದರೂ, ನಮ್ಮ ದೇಶದಲ್ಲ ಸಂಭಾಷಣೆಗೂ ಸ್ನೇಹಕ್ಕೂ ಯಾವ ಅಡ್ಡಿಯೂ ಇಲ್ಲವಲ್ಲ. ಇಬ್ಬರೂ ಸನಾತನಿಗಳು; ಪ್ರಾಚೀನ ರೀತಿಯವರು. ಆದ್ದರಿಂದ ಸುಲಭದಲ್ಲೇ ಸಲಿಗೆ ಯನ್ನು ಸಂಪಾದಿಸಿಕೊಂಡರು. ಜುಟ್ಟಿಲ್ಲದ ಪ್ರಾಣಿಗಳನ್ನು ಸ್ವರ್ಗಕ್ಕೆ ದೇವರು ಹೇಗೆ ಎಳೆದುಕೊಂಡಾರು, ಎಂಬ ಮಹತ್ ಸಮಸ್ಯೆ ಅವರನ್ನು ಕೊಂಚಕಾಲ ಪೀಡಿಸಿತು. ಅಷ್ಟರೊಳಗೆ, ಅಮರ ಬರದವರಿಗೆ ಅಮರತ್ವ ಪ್ರಾಪ್ತವಾಗುವುದೇ, ಎಂದು ಶಂಭುಶಾಸ್ತ್ರಿಗಳು ಕೇಳಿದರು. ಮೂರ್ಧನ್ಯ ದಲ್ಲಿಡಬೇಕಾದ ವಸ್ತುವನ್ನು ದಂತ್ಯಕ್ಕಿಳಿಸಿ ಎಂಜಿಲು ಮಾಡುವುದು ಧರ್ಮವೇ ಎಂದು ಅವರು ಕರ್ಣಾ (ನಾ) ಟಕದ ಪ್ರಶ್ನೆಗೂ ಹೊರಳಿದರು. ಆಗ ಹಲವು ನವಯುಗದ ತರುಣರು ಅವರ ಮುಂದೆ ಸೇದುಬತ್ತಿಯನ್ನುರಿ ಸುತ್ತಾ ನಡೆದು ಹಾದುಹೋದರು. "ಬ್ರಾಹ್ಮಣನ ಮನೆಯ ಮೇಲೆ

ಸದಾ ಹೊಗೆಯಾಡುತ್ತಿರಬೇಕೆಂಬ ವಿಧಿ ಇದೆಯೇ ಹೊರತು, ಅವನ ಮುಖದ ಸುತ್ತ ಈ ಸುಟ್ಟ ಹೊಗೆ ಸುಳಿಯುತ್ತಿದೆಯಲ್ಲಾ !" ಎಂದು ನಾರಾಯಣಯ್ಯನವರು ವ್ಯಥೆಪಟ್ಟರು. "ಹಾಳು ಹೊಗೆಯನ್ನು ಅವರು ನುಂಗಬಾರದೆ ? " ಯಾರಾದರೂ ಹೇಳಬಾರದೆ, ಇವರಿಗೆ ? "ಸಿಗರೇಟು 'ಕುಡಿಯಿರಿ' ಎಂಬ ಪರಂಗಿಯವರ ವಾಕ್ಯವನ್ನು ಇವರು ಪರಿಪಾಲಿಸಿದರೆ ಎಲ್ಲರಿಗೂ ಕ್ಷೇಮ. ಅದನ್ನು ಪರರ ಮುಖಕ್ಕೆ ಉಗುಳುವುದೇಕೆ ? " ಎಂದು ಶಾಸ್ತ್ರಿಗಳೂ ಪಲ್ಲವಿ ಹಾಡಿದರು. ಆಮೇಲೆ ಅವರು ನಾರಾಯಣಯ್ಯನವರ ಕಡೆ ತಿರುಗಿ, "ತಮಗೆ ಮಕ್ಕಳೆಷ್ಟು ? " ಎಂದರು.

"ಮೂರನೆಯ ವಿವಾಹದಲ್ಲಿ ಒಂದು ಗಂಡು, ಮೊದಲನೆಯದೆರಡೂ ಗೊಡ್ಡು"

"ಸದ್ಯಃ, ಇರುವುದೊಂದು ಗಂಡಾದರೂ,....ಬೀಡಿ....ವಗೈರೆ...."

"ದೇವರು ಅಷ್ಟರಮಟ್ಟಿಗೆ...."

"ಮಸಾಲೆ ಆಸೆಗೆ ಹೋಟಲುಗೀಟಲು...."

"ಇಲ್ಲ....ಇಲ್ಲ...."

"ಸಿನಿಮ ? ದಿನಕ್ಕೆ ಒಂದು ಸಾಕೆ, ಎರಡು ಬೇಕೆ ?"

"ಅಲ್ಲಿಗೆ ಅವನು ನುಗ್ಗುವುದೇ ಇಲ್ಲ...."

"ಸುಳ್ಳು....ಪೊಳ್ಳು ?"

"ಕೇಳಲೇ ಬೇಡಿ"

"ಸಾಲ....ಸೋಲ ?"

"ಅದರ ಸುಳಿವೇ ಇಲ್ಲ"

"ನಾರಾಯಣಯ್ಯನವರೇ! ನಿಜವಾಗಿಯೂ ನೀವು ಪುಣ್ಯವಂತರು..."

"ಏನೋ, ತಮ್ಮ ಆಶೀರ್ವಾದ !"

"ಎಲ್ಲಿ ಓದುತ್ತಿದಾನೆ ? ಸಂಸ್ಕೃತ ಶಾಲೇಜಿಗೆ ಸೇರಿಸಿದೀರಿ ಅಂತ ಕಾಣುತ್ತೆ"

"ಇಲ್ಲ ಇನ್ನೂ! ಮನೆಯಲ್ಲೇ ಕಲಿಯುತ್ತಿದಾನೆ.

"ಏನನ್ನ ? ಅಮರ"

"ಇಲ್ಲ....ಶಬ್ದ !"

" ಯಾವ ಶಬ್ದ? "

" ಅಮ್ಮ, ಅಪ್ಪ, ಶಬ್ದ! "

" ಅಂದರೆ....? "

" ಅಂದರೆ, ಅವನಿಗಿನ್ನೂ ಒಂದು ವರ್ಷ ತುಂಬಿಲ್ಲ...."



**ಅಳಿಯನ ಡೊಂಕು** ೧೨

# ಅನಂತಯ್ಯನ ಅದೃಷ್ಟ



ಅನಂತಯ್ಯನಿಗೆ ಅದೃಷ್ಟ ಆವರಿಸಿದ ಬಗೆಯನ್ನು ನೆನೆದರೆ ಅವನ ಆಪ್ತಸ್ನೇಹಿತರೆಲ್ಲ ಇವತ್ತು ಕೂಡ ನಗುತ್ತಾರೆ. ಅವನು ಮದುವೆಯಾಗಿ ಮಾವನ ಮನೆ ಸೇರಿ ಅವರ ಆಫೀಸಿನಲ್ಲೇ ಜೂನಿಯರಾಗಿ ಜೋತು ಬಿದ್ದಿದ್ದ. ಅವನ ಶಿಂಗಾರದ ವೆಚ್ಚಕ್ಕೆ ಮಾವನೇ ಕಾಸು ಕೊಡಬೇಕು; ಆಕೆಯ ಅಲಂಕಾರಕ್ಕೆ ವೆಚ್ಚ ಮಾಡಲು ಅವನ ಹತ್ತಿರ ಒಂದು ಬಿಡಿ ಕಾಸೂ ಇರಲಿಲ್ಲ. ಅವನದು ಒಂದು ರೀತಿಯ ಮೋಸ ಜೀವನ. ಮಾವನವರ ಕೊಟ್ಟಿಗೆಯಲ್ಲಿ ಕಲಗಚ್ಚು ಕುಡಿದು ಬಿದ್ದಿದ್ದ ದನಗಳ ಹಾಗೆ ಅವನೂ ಬಾಯಿ ಮುಚ್ಚಿಕೊಂಡು ಮೂಕನಾಗಿ ತನ್ನ ಸಂಕಟವನ್ನು ಮೆಲುಕು ಹಾಕುತ್ತಿದ್ದ. ಆದರೆ, ಅವನ ಅಂತರಾತ್ಮನಿಗೆ ಶಾಂತಿ ಇರಲಿಲ್ಲ. ತನ್ನ ಬದುಕಿನ ಬುಡದಲ್ಲಿ ತಂದೆ ಆಡಿದ ಸುಳ್ಳೊಂದು ಸೇರಿಕೊಂಡು ಅವನ ಸ್ಥೈರ್ಯವನ್ನು ಕೊರೆದು ತಿನ್ನುತ್ತಿತ್ತು. ಬಾಬಾ ಬುಡನ್‌ಗಿರಿಯ ಹತ್ತಿರ ಕಾಫಿ ತೋಟಗಳಿವೆ ಎಂದು ಹೇಳಿ ಅವನ ತಂದೆ ಅವನನ್ನು ಮಾರಿ ಮೂರು ಸಾವಿರ ರೂಪಾಯಿ ವರದಕ್ಷಿಣೆ ಪಡೆದು ಸ್ವಂತ ಸಾಲ ತೀರಿಸಿ ಸುಖವಾಗಿ ಸ್ವರ್ಗಸ್ಥರಾದರು.

ತಂದೆ ತೀರಿದ ಮೇಲೆ, ಅನಂತಯ್ಯನಿಗೆ ಮಾವನೇ ಆಶ್ರಯ. ಪಿತೃ ವಾಕ್ಯಪರಿಪಾಲನೆಗಾಗಿ ಅವನು “ಆ ತೋಟವನ್ನು ಮಾರಿ ಆರು ಸಾವಿರ ರೂಪಾಯನ್ನು ಯಾವುದೋ ಬ್ಯಾಂಕಿನಲ್ಲಿರಿಸಿದೇನೆ” ಎಂದು ಸುಳ್ಳು ಹೇಳಿ ಲಾಯರಿ ಕೆಲಸಕ್ಕೆ ಸೇರಿದ. ಗೃಹಲಕ್ಷ್ಮಿಯ ಪ್ರಸಾದವೇ ಅವನಿಗೆ ಪರ ಮಾನ್ನ; ಮಾವನ ಮುಗುಳು ನಗೆಯೇ ಅವನಿಗೆ ಬೆಳುದಿಂಗುಳು....ಆ ಮಾವನೋ, ಮಹಾ ಜಿಪುಣ. ‘ಹೆಚ್ಚು ಖರ್ಚಿಗೆ ನಿನ್ನ ಹಣದ ಬಡ್ಡಿ ಉಪ ಯೋಗಿಸು’ ಎಂದು ಬುಸುಗುಟ್ಟುತ್ತಿದ್ದ. ಹಣವೆಲ್ಲಿ? ಬಡ್ಡಿ ಎಲ್ಲಿ?....ತನ್ನ ಹೆಂಡತಿ ಗೊಳೋ ಎಂದು ಯಾವಾಗಲಾದರೂ ಪ್ರಾರಂಭಿಸಿದರೆ, ತಾಳೆ! ಐದಾರು ವರ್ಷ ಆ ಬಡ್ಡಿ ಶೇಖರವಾದರೆ, ನಾವಿಬ್ಬರೂ ಒಂದು ‘ಟೂರ್’ ಹೊರಡೋಣ. ಟಾಜ್‌ಮಹಲ್ ಹೋಟಲು, ಟಾಜ್‌ಮಹಲ್ ಉದ್ಯಾನ, ಕಾಶ್ಮೀರದ ಕೇಸರಿ ವನ, ಜೋಗದ ಜಲಪಾತದಲ್ಲಿ ಹಗಲಿರುಳೂ ಮಿನು ಗುವ ಕಾಮನ ಬಿಲ್ಲು, ನರ್ಮದಾ ನದಿಯ ಮೇಲೆ ಅಮೃತಶಿಲಾ ಮಾರ್ಗ ದಲ್ಲಿ ನೌಕಾವಿಹಾರ, ದಂಡಕಾರಣ್ಯದಲ್ಲಿ ದೂರ್ವಾಸರ ಆತಿಥ್ಯ ಮಾಡೋಣ ವಂತೆ, ನೋಡೋಣವಂತೆ” ಎಂದು ಮಾತುದುರಿಸಿ ಅವಳನ್ನು ಮಂಕು ಬಡಿದು ಬಿಡುವನು. ಅವಳ ಟೆಂಪಸಕ್ಕ ಇಂಪುಂಟುಮಾಡುವನು.

ಮೂರು ವರ್ಷದ ಹಿಂದಿನ ಮಾತು! ಅನಂತಯ್ಯ ಆವೂರಿನ ‘ಇಂದ್ರ ಭವನ’ಕ್ಕೆ ಹೋಗಿದ್ದ. ದುಂಡುಮೇಜಿನ ಸುತ್ತ ಆಗಲೇ ಗೆಳೆಯರನೇಕರು ಸೇರಿದ್ದರು. ಯಾರಾದರೊಬ್ಬರು ತನ್ನ ‘ಬಿಲ್ಲ’ನ್ನೂ ಕೊಡುವರೆಂಬ ಕೆಚ್ಚಿನ ಮೇಲೆ ಅವನೂ ಅಲ್ಲಿ ಕುಳಿತ. ‘ದಿವಾಳಿ’ ಎಂದರೆ ಏನು, ಹೇಗೆ ಎಂಬುದರ ವಿಷಯವಾಗಿ ಆಗಲೇ ಚರ್ಚೆ ಪ್ರಾರಂಭವಾಗಿತ್ತು. ಹೊಸದಾಗಿ ಡಿಗ್ರಿ ಪಡೆದ ಅರ್ಥ ಶಾಸ್ತ್ರಿಗಳೊಬ್ಬರು ಆರ್ಥಿಕ ಮುಗ್ಗಟ್ಟಿನ ಮೇಲೆ ಅರ್ಥವಾಗದ ಉಪನ್ಯಾಸವೊಂದನ್ನು ಒಪ್ಪಿಸುತ್ತಿದ್ದರು. ಮತ್ತೊಬ್ಬರು, “ನೋಡಪ್ಪ! ನಾವೆಲ್ಲ ಸೇರಿ ಈಗ ೬೪ ಇಡ್ಲಿಗಳನ್ನು ತಿಂದು ಮುಗಿಸಿದೇವೆ. ಇದರ ಹಣ ವನ್ನು ನಾಳೆ ಕೊಡುತ್ತೇವೆ ಎಂದು ಹೇಳಿ ಹೊಟ್ಟೆಗಳನ್ನು ಹೊತ್ತುಕೊಂಡು ನಾವು ಎದ್ದು ಹೋದರೆ, ಈ ಹೋಟಲು ಮಾಲೀಕನು ಹಾಲಿನವನಿಗೆ ನಾಳೆ ಹಣ ಕೊಡುತ್ತೇನೆ ಅಂತಾನೆ, ಅವನು ಹುಲ್ಲಿನವನಿಗೆ ನಾಳೆ ಬಾ ಅಂತಾನೆ, ಅವನು ತಾನು ಉಪ್ಪು ಹುಳಿ ತರುವ ಚಿಲ್ಲರೆ ಅಂಗಡಿಯವನಿಗೆ ಹೋಗಿ

ಬಾ ಅಂತಾನೆ, ಅವನು 'ಮುಂಡಿ' ಯವನಿಗೆ ನಿಧಾನವಾಗಿ ಕೊಡುತ್ತೇನೆ ಅಂತಾನೆ, ಅವನು ಬ್ಯಾಂಕಿನವರಿಗೆ ಯೋಚನೆ ಮಾಡಬೇಡಿ ಅಂತಾನೆ, ಅವರು ತಮ್ಮಲ್ಲಿ ಹಣ ಡೆಪಾಸಿಟ್ ಮಾಡಿದವರಿಗೆ ಇಲ್ಲೇ ಇಟ್ಟಿರಿ ಅಂತಾರೆ, ಅವರಿಗೆ ಅನುಮಾನವಾಗುತ್ತೆ, ಈಗಲೇ ಕೊಡಿ ಅಂತಾರೆ, ಅವರು ಇವರನ್ನ, ಇವರು ಅವರನ್ನ, ಈಗಲೇ ಕೊಡಿ, ಈಗಲೇ ಕೊಡಿ, ಅಂತಾರೆ, ಕೊನೆಗೆ ನಮ್ಮನ್ನ ಈಗಲೇ ಕೊಡಿ ಅಂತಾರೆ, ನಾವಿಲ್ಲ ಅಂತೀವಿ, ಆಗ ಬ್ಯಾಂಕ ದಿವಾಳಿ, ಮುಂಡಿ ದಿವಾಳಿ, ಅಂಗಡಿ ದಿವಾಳಿ, ಹಸು ಬಂಜೆ, ಹೋಟಲು ಪಾಪರು....ನಮ್ಮ ಹೊಟ್ಟೆ ಮಾತ್ರ ಭರ್ತಿ!" ಎಂದರು.

ಅನಂತಯ್ಯನಿಗೆ ಅವರ ಮಾತಿನ ಸ್ವಾರಸ್ಯ ಬಲು ಬೇಗ ಹತ್ತಿತು. ಅವನು ಅವರ ಹತ್ತಿರಕ್ಕೆ ಸರಿದು ಅವರ ಬಾಯನ್ನೇ ನೋಡುತ್ತ ಕುಳಿತ. ಆಗ ಅವರು, "ಏನ್ರಿ! ನಿಮ್ಮ ಹಣ ಏನಾದರೂ ಇತ್ತೇನು, 'ಬಾಬಾ' ಬ್ಯಾಂಕಿನಲ್ಲಿ?" ಎಂದರು. ತಕ್ಷಣ ಅನಂತಯ್ಯನ ಮಿದುಳಿನಲ್ಲಿ ಬುದ್ಧಿ ಶಕ್ತಿಯ ಪ್ರವಾಹ ಹರಿಯಿತು.... "ಯಾವ ಬ್ಯಾಂಕು....ಏಕೆ" ಎಂದು ಅವನು ಗದ್ಗದಿಸಿದ. ಅವನ ತುಟಿ ಒಣಗಿತು. "ಬಾಬಾ ಬ್ಯಾಂಕು! ಮೊನೆ ದಿವಾಳಿಯಾದದ್ದು" ಎಂಬ ಉತ್ತರ ಬಂತು.

"ಹಾ!" ಎಂದು ಚೀರುತ್ತ ಅನಂತಯ್ಯ ನೆಲದ ಮೇಲೆ ಬಿದ್ದ.... ಶಾಲಾ ಕಾಲೇಜುಗಳಲ್ಲಿ ಅವನು ಅನೇಕ ನಾಟಕಗಳಲ್ಲಿ ಭಾಗವಹಿಸಿದ್ದ.... ಅವನ ಗೆಳೆಯರು ಕುರ್ಚಿಗಳಿಂದಿಳಿದು ಸುತ್ತ ಕುಳಿತು ಗಾಳಿ ಬೀಸಿ ಗಂಟಲಿಗೆ ಬಿಸಿ ಬಿಸಿ ಉಚಿತ ಪಾನೀಯ ಸುರಿದರು.... ಅನಂತಯ್ಯ ಮೆಲ್ಲಗೆ ಒಂದು ಕಣ್ಣು ತೆರೆದ... "ಅನಂತಯ್ಯ! ಅನಂತಯ್ಯ! ನಿನ್ನ ಹಣ ಎಷ್ಟಿತ್ತು? ಅಂದರು ಅವರು. "ಆರು ಸಾವಿರ! ಆ....ರು ಸಾ....ವಿ....ರ!" ಎಂದ. "ಹಾ!" ಎಂದು ಅವರೆಲ್ಲರೂ ಒಟ್ಟಿಗೆ ಅನುಕಂಪಿಸಿದರು. ಪಾಪಿಗಳು, ಚಂಡಾಲರು ಎಂದು ಅವರು ಬ್ಯಾಂಕಿನವರನ್ನು ಬೈದರು.

ಅನಂತಯ್ಯ ಕಷ್ಟದಿಂದ ಎದ್ದು ಕುಳಿತ. ಹೃದಯವನ್ನು ಅದುಮಿ ಹಿಡಿಯಲು ಎದೆಯ ಬಲಗಡೆ ಅಂಗೈಯನ್ನಿಟ್ಟ. ಥಟಕ್ಕನೆ ತಿದ್ದಿಕೊಂಡ, ತಲೆ ಸುತ್ತಿತು ಎಂಬಂತೆ ಮತ್ತೆ ನೆಲದ ಮೇಲೊರಗಿದ.

ಸ್ನೇಹಿತರೆಲ್ಲರೂ ಸೇರಿ ಒಂದು ಟಾಂಗಾ ಗೊತ್ತುಮಾಡಿ ಅವನನ್ನು ಮಾವನ ಮನೆಗೆ ಸಾಗಿಸಿ ಮಲಗಿಸಿ ಬಂದರು. ಅವನ ಧರ್ಮಪತ್ನಿ ಹಾಸಿಗೆಯ ಸುತ್ತ ಹರಿದಾಡಿದಳು; ಮಾವನವರೂ ಕೂಡ ಹೆದರಿ ಹಿಂಗಾಲು ಕಂಗಾಲಾದರು. ಅವರು ಕೋಣೆಯೊಳಗೆ ಬಂದಾಗಲೆಲ್ಲ ಅನಂತಯ್ಯ ಆರು ಸಾವಿರ, ಕಾಮನ ಬಿಲ್ಲು, ಅಮೃತಶಿಲೆ, ಕಾಂಚನಗಂಗಾ ಎಂದು ಕೂಗಿ ವಿಕಟಾಟ್ಟಹಾಸ ಮಾಡಿ ಹುಚ್ಚಿದ್ದಂತೆ ನಟಿಸಿದ. ಮುದುಕನಿಗೆ ಭೀತಿ ಹತ್ತಿತು....ಮೆಲ್ಲಗೆ ಹಾಸಿಗೆ ಬಳಿ ಬಂದು ಮಂಡಿಸಿ, ಅನಂತಯ್ಯನ ಹಣೆಯ ಮೇಲೆ ಕೈಯ್ಯಾಡಿಸುತ್ತ ‘ಆರು ಸಾವಿರದ ಯೋಚನೆ ಮಾಡಬೇಡ, ಅನಂತ! ಇಕೊ! ಆರು ಸಾವಿರ! ನಾನು ಕೊಡುತ್ತೇನೆ!” ಎಂದು ಹೇಳಿ ಒಂದು ಕಟ್ಟು ನೋಟನ್ನು ಅವನ ಕೈಯ್ಯಲ್ಲಿಟ್ಟರು. ಹುಚ್ಚನಂತೆ ಅವನು ಅದನ್ನು ಕಪಿಮುಷ್ಟಿಯಿಂದ ಹಿಡಿದು ಕಣ್ಣರಳಿಸಿ ಮುದ್ದಿಕ್ಕಿ ಎದೆಗಪ್ಪಿ ಬಿಗಿ ಹಿಡಿದನು.

ಆ ಹೊತ್ತಿನಿಂದ ಅವನ ಚೇಷ್ಟೆಗಳೆಲ್ಲವೂ ಕ್ರಮವಾಗಿ ಕಡಿಮೆಯಾಯಿತು. ತಲೆನೋವು, ಮೈ ಕೈ ನೋವು ಎಲ್ಲವೂ ಇಳಿಮುಖವಾಯಿತು. ಆಹಾರದಾಹಗಳು ಎಂದಿನಂತೆ ಮಿತವಾದವು. ಮಾವನೂ ಮಗಳೂ ಮತ್ತೆ ಸುಖದ ದಿನಗಳನ್ನು ಕಂಡರು.

ಪುನಃ ಅನಂತಯ್ಯ ‘ವಾಕಿಂಗ್’ ಪ್ರಾರಂಭಿಸಿದ....ಒಂದು ದಿನ ಅವನೆದುರು ಅವನ ಸಹಪಾಠಿ ಸೋಮುವಿನ ಆಕಾರ ಕಾಣಿಸಿತು. ಇಬ್ಬರೂ ಒಟ್ಟಿಗೆ ಸ್ತಬ್ಧರಾದರು! “ಸೋಮು ಅಲ್ಲವೇನೋ?” “ಇಲ್ಲದಿಯಾ ಅನಂತ!” ಎಂದು ಇಬ್ಬರೂ ಒಟ್ಟಿಗೆ ಉದ್ಗಾರತೆಗೆದರು. ಇಬ್ಬರೂ “ಇಂದ್ರ ಭವನ”ದೊಳಕ್ಕೆ ತಿಳಿಯದೆಯೇ ನುಗ್ಗಿದರು. ದುಂಡು ಮೇಜಿನ ಸುತ್ತ ಕುಳಿತರು. ಸೋಮು ತನ್ನ ಕಥೆಯನ್ನೆಲ್ಲ ಹೇಳಿದ. ಬೆಂಗಳೂರಲ್ಲೇ ಲಾಯರು. “ಬಾಬಾ” ಬ್ಯಾಂಕಿನ ದಿವಾಳಿ ಸಂದರ್ಭದಲ್ಲಿ ಯಾರು ಯಾರಿಗೆ ಬ್ಯಾಂಕಿಂದ ಎಷ್ಟೆಷ್ಟು ಹಣ ಸಲ್ಲಬೇಕೆಂದು ಗೊತ್ತು ಮಾಡಿ ರೂಪಾಯಿಗೆ ಎಷ್ಟು ಆಣೆ ಕೊಡಬಹುದೆಂದು ನಿರ್ಧರಿಸಲು ಲಿಕ್ವಿಡೇಟರಾಗಿ ನಿಯಮಿತನಾಗಿರುವನಂತೆ, ಸೋಮು!

"ನನ್ನ ಅದೃಷ್ಟ ಅಂದರೆ ಇದು ಕಣೋ" ಎಂದು ಹೇಳುತ್ತಾ ಅನಂತ ಇನ್ನೊಂದೆರಡರ್ಧ ಕಾಫಿಗೆ ಆರ್ಡರ ಮಾಡಿದ. "ಅದರ ಬಿಲ್ಲು ನೀನೇ ಕೊಡಬೇಕು! ನಿನ್ನ ಮಾವ, ಗೃಧ್ರ ಹಣ ಕೊಡುತ್ತಿದಾನೆ ತಾನೆ ಈಚೆಗೆ?" ಎಂದು ಸೋಮು ವಿಚಾರಿಸಿದ.

"ಹೇಳುತ್ತೀನೆ, ಕೇಳು!" ಎಂದು ಅನಂತಯ್ಯ ಉದ್ದಕ್ಕೂ ಹೇಳಿದ. ಸೋಮು ಹತ್ತಿರ ಯಾವುದೂ ಮರೆ ಮಾಚಲಿಲ್ಲ.

---

ನೆರೆಮನೆಯವನ ಡೊಂಕು ೧೩

# ಟುವ್ವಿ-ಟುವ್ವಿ!

ನಮ್ಮದು ಇನ್ನೂ ಹೊಸ ಸಂಸಾರ. ಒಂದೇ ಒಂದು ಪುಟ್ಟ ಪಾಪ, ಮನೆಯಲ್ಲಿ. ಅವನು ಹುಟ್ಟುವ ಮೊದಲು ನಾವು ಯಾವಯಾವುದೋ ಪ್ರಾಣಿಗಳನ್ನು ಸಾಕಿದೆವು. ಆದರೆ ಅವೊಂದೂ ನಮಗೆ ಸರಿಬೀಳಲಿಲ್ಲ. ಸರಪಣಿಯ ತುದಿಯಲ್ಲಿ, ಪಂಜರದ ಬಂಧನದಲ್ಲಿ, ಜೀವಂತ ಪ್ರಾಣಿಗಳನ್ನು ಸಾಕುವುದೆಂದರೆ ಒಂದು ರೀತಿಯ ಹಿಂಸೆ ಎಂಬುದು ನಮಗೆ ಭಾಸವಾಯಿತು. ಅದೂ ಅಲ್ಲದೆ, ಅವುಗಳಿಂದ ಅಪಾಯಗಳೇ ಹೆಚ್ಚು. ಸಣ್ಣ ನಾಯಿಗಳಾದರೆ ನಮ್ಮ ಕಾಲಿಗೆ ಸಿಕ್ಕಿ ಸಾಯುತ್ತವೆ. ಭಾರಿ ನಾಯಾದರೆ ಅವಕ್ಕೆ ನಾವು ತಗುಲಿ ಕೆಳಗೆ ಬೀಳುತ್ತೇವೆ. ಗಿಣಿಗಳು ಹೇಳುವ ಮಾತಿಗೆ ಅರ್ಥ ಮಾಡಿಕೊಳ್ಳುವುದು ಶುಕ ಮಹರ್ಷಿಗಳಿಂದಲೇ ಸಾಧ್ಯ. ಬೆರಳು ತೋರಿಸಿದರೆ ಅವು ತುದಿಯನ್ನೇ ತಿಂದುಬಿಡುತ್ತವೆ. ಹೀಗಾಗಿ, ಕಡೆಗೆ ಪುಟ್ಟ ಪಾಪ ಬಂದು ನಮ್ಮ ಪ್ರೇಮಲಹರಿಯನ್ನು ತನ್ನ ತೊಟ್ಟಿಲಕಡೆ ಹರಿಸಿದ.

ಮೊನ್ನೆ ನಾನು ನಮ್ಮ ಮನೆ ಹಿತ್ತಲಲ್ಲಿ ಒಂದು ಗುಂಡಿ ತೋಡುತ್ತಿದ್ದೆ, ನನ್ನ ಹಳೇ ಪದ್ಯಗಳನ್ನೆಲ್ಲ ನೆಲದೊಳಗೆ ಹೂತಿಡಲು. ಆಗ ಸುಮ್ಮನೆ

ನನ್ನೊಳಗೆ ನಾನೇ, ಅಂದರೆ, ತುಸು ಗಟ್ಟಿಯಾಗಿ, ಟುವ್ವಿ ಟುವ್ವಿ ಟುವ್ವಿ ಎಂದು ಕೂಗಿದೆ. ಇದ್ದಕ್ಕಿದ್ದಹಾಗೆ, ನನ್ನೆದುರಿಗಿನ ಪೊದೆಯೊಳಗಿಂದ ಟುವ್ವಿ ಟುವ್ವಿ ಎಂಬ ದನಿ ಕೇಳಬಂತು! ಕವಿ ಹೃದಯ ಉಬ್ಬಿತು. ಆನಂದ ಉಕ್ಕಿತು.

ನನ್ನ ಮನೆ ಊರೊಳಗಣ ಸಂದುಗೊಂದುಗಳಲ್ಲಾಗಿದ್ದರೆ ನನ್ನ ಹೃದಯ ಇಷ್ಟು ಅರಳುತ್ತಿರಲಿಲ್ಲ. ಊರಾಚೆಯ ಹೊಸ ಬಡಾವಣೆಗಳಲ್ಲಿ ನಾವು ಪ್ರಕೃತಿ ದೇವಿಗೆ ತೀರ ಹತ್ತಿರ. ನಮ್ಮ ಹಿತ್ತಲುಗಳ ತುಂಬ ಗಿಡಮರಗಳು; ಕಾಯಿಪಲ್ಯದ ತೋಟಗಳು; ಹೂವಿನ ಗಿಡಗಳ ಉದ್ಯಾನಗಳು; ಕಾಂಪೌಂಡ್ ಗೋಡೆಗಳಿಗೆ ಬದಲು ನಾವು ದಟ್ಟವಾಗಿ ಗಿಡಗಂಟೆಗಳನ್ನೇ ಬೆಳೆಸಿ ಹಸುರು ಬೇಲಿಗಳನ್ನೇ ಎಬ್ಬಿಸಿದ್ದೆವು.

ಅಲ್ಲದೆ, ನಾನು ಕೊಳಲು, ನವಿಲು, ಗರಿ, ನಾದಲೀಲೆ, ತಾವರೆ, ಮಾಂದಳಿರುಗಳನ್ನು ಓದಿದ್ದೆ. ಆಗ ತಾನೆ ಕು. ವೆಂ. ಪು. ರವರ ಟುವ್ವಿ ಟುವ್ವಿ ನನ್ನ ಎದೆಯ ಗೂಡಿನಲ್ಲಿ ಕುಳಿತು ತುಟಿ ತೆರೆಸಿ ಹೊರಹಾದಿತ್ತು. ಪೊದೆಯ ಮೇಲೆ ಇದ್ದ ಹಕ್ಕಿ ಮಾರ್ದನಿ ಕೊಟ್ಟಿತ್ತು.

ಮತ್ತೆ ಆ ಹಳೆಯ ಚಾಳಿ ನನ್ನ ಅಂತರಂಗದ ಹೊಸ್ತಿಲಿಗೆ ಬಂತು. "ಹಿತ್ತಲಲ್ಲೊಂದು ಹಕ್ಕಿಯನ್ನು ಸಾಕಬಹುದು; ತಾನಾಗೆ ಒಲಿದದ್ದು; ಬಾಂದಳವೇ ಅದರ ಪಂಜರ, ಗಿಡಗಂಟೆಗಳೇ ಅದರ ಕಂಬಿ; ನಲಿನಲಿವ ನೆಲವೇ ತಳ; ಟುವ್ವಿ ಟುವ್ವಿ ಎಂಬ ಇಂಚರವೇ ನಾನು ಚೆಲ್ಲುವ ಕಾಳಿಗೆ ಪ್ರತಿಫಲ............

ಮೆಲ್ಲನೆ ಒಳಗೆ ಧಾವಿಸಿ ಆಕೆಗೆ ಹೇಳಿದೆ. "ಇರಬಹುದು" ಎಂದಳು. "ಇದೆ" ಎಂದೆ. ಅವಳೂ ನನ್ನ ಸಂಗಡ ಗುಂಡಿಯ ಹತ್ತಿರಕ್ಕೆ ಸಾವಧಾನದಿ ಸರಿದು ಬಂದಳು.

ನಾನು ಮತ್ತೊಮ್ಮೆ "ಟುವ್ವಿ ಟುವ್ವಿ" ಎಂದೆ. ಅವಳ ಸಾಮೀಪ್ಯದಿಂದ ನಾದ ಅಷ್ಟು ಇಂಪಾಗಲಿಲ್ಲ. ಆದ್ದರಿಂದಲೋ ಏನೋ ಪಕ್ಷಿ ಮೌನ ತಾಳಿತು. ಮತ್ತೊಂದು ಸಾರಿ ಅಂದೆ. ಆಗ, ಅದು ಅನುಮಾನ ಅಸಮಾಧಾನ ಎರಡನ್ನೂ ಮಿಶ್ರಮಾಡಿ ಒಂದು ಸಾರಿ ಟುವ್ವಿ ಟುವ್ವಿ ಎಂದಿತು. ನಮ್ಮಿಬ್ಬರಿಗೂ ಅದು ಸ್ಪಷ್ಟವಾಗಿ ಕೇಳಿಸಿತು. "ಅನ್ನಿ, ಇನ್ನೂ ಅನ್ನಿ"

ಅಂದಳಾಕೆ. ಅಂದೆ, ಹಕ್ಕಿಯೂ ಕೂಡ ಬಹಳ ಉತ್ಸಾಹದಿಂದ ತುಂಬು ಕಂಠದಿಂದ ಉತ್ತರಕೊಟ್ಟಿತು. ನನ್ನೊಂದಿಗೆ ಇಷ್ಟು ಸರಸವಾಗಿ ಸಹಜ ವಾಗಿ ಸಲ್ಲಾಪಮಾಡುವ ಸ್ನೇಹಿತನನ್ನು ನೋಡಬೇಕೆಂಬ ಆಸೆ ಬಲ ವಾಯಿತು. ಗಿಡಗಂಟಿಗಳೊಳಗೆಲ್ಲ ಕಣ್ಣೋಡಿಸಿದೆ.

ಆಗ ಮನೆಯೊಳಗಿಂದ ನಮ್ಮ ರಾಗಾಲಾಪನಚತುರ ನಮ್ಮಿಬ್ಬರನ್ನೂ ಕೂಗಿದ, ತನ್ನದೇ ಆದ ವೈಖರಿಯಲ್ಲಿ. ನಾವಿಬ್ಬರೂ ಮನೆಯೊಳಕ್ಕೆ ಹೊರಟು ಹೋದೆವು.

ಅವನನ್ನು ಎತ್ತಿ ಆಡಿಸಿ ಸಮಾಧಾನಪಡಿಸಿದಾಗ ನನ್ನ ಯೋಚನೆ ಎಲ್ಲವೂ ನನ್ನ ವಿಹಂಗಮ ಸ್ನೇಹಿತನ ಮೇಲೆಯೇ ಇತ್ತು. ಟುವ್ವಿ ಟುವ್ವಿ ಎಂದು ಹಾಡುವ ಹಕ್ಕಿಯ ಹೆಸರೇನು? ಅದು ಕನ್ನಡಿಗ ಹಕ್ಕಿಯೇ? ಹಿಂದೀ ಹಕ್ಕಿಯೇ? ಟುವ್ವಿ ಎಂಬುದು ಯಾವುದರ ತದ್ಭವ? ಅದರ ನಂಟರು ಯಾರು ಯಾರು? ಕಾಜಾಣವೇ ಕೋಗಿಲೆಯೇ? ಗೊತ್ತಾಗಲಿಲ್ಲ. ಅರ್ಥ ಕೋಶ ತಿರುವಿಹಾಕಿದೆ. ಅದರಲ್ಲಿ ಟುವ್ವಿ ಶಬ್ದವೇ ಇಲ್ಲ; ಹಾರುವ ಎಂಬುದರ ಕೆಳಗೆ ಪಕ್ಷಿಗಳ ಪ್ರಸ್ತಾಪವೇ ಇಲ್ಲ! "ಹಂಸ" ವಿರಬಹು ದೆಂದು ಆಕೆ ವಾದಿಸಿದಳು. ಆದರೆ, ಮಾನಸ ಸರೋವರದಿಂದ ಇಷ್ಟು ದೂರವಿರುವ ನಮ್ಮ ಮನೆ ಹಿತ್ತಲಿಗೆ ಹಂಸಗಳು ಬರಲಾರವು ಎಂದು ನಾನು ಪ್ರತಿಪಾದಿಸಿದೆ.

ಐದಾರು ನಿಮಿಷಗಳಲ್ಲೇ ನಾನು ಮತ್ತೆ ಹಿತ್ತಲಿಗೆ ಹೋದೆ. ಪಾಪ, ನನ್ನ ಬರವನ್ನೇ ಆ ಹಕ್ಕಿ ನಿರೀಕ್ಷಿಸುತ್ತಿತ್ತು! ಏಕೆಂದರೆ, ನನ್ನನ್ನು ಕಾಣುತ್ತಲೂ ಅದು ತಾನಾಗಿಯೇ "ಟುವ್ವಿ-ಟುವ್ವಿ" ಎಂದು ಗಾನ ಮಾಡಿತು. ಇಷ್ಟು ಶೀಘ್ರದಲ್ಲೇ ಒಂದು ಪಕ್ಷಿಯ ಹೃದಯವನ್ನು ಸೂರೆಮಾಡುವಂತಹ ಸದ್ಗುಣಗಳು ನನ್ನಲ್ಲಿ ತುಂಬಿವೆ ಎಂದು ಮನಗಂಡಾಗ ನನಗೆ ರೋಮಾಂಚ ವಾಯಿತು. ಆದಷ್ಟು ಬೇಗ ಅದನ್ನು ಪತ್ತೆಹಚ್ಚಿ ಅದಕ್ಕೆ ಕಡಲೆಪುಡಿ ಕಲ್ಲುಸಕ್ಕರೆ ತಿನ್ನಿಸಿ, ಅದನ್ನ ಭುಜದ ಮೇಲಿರಿಸಿಕೊಂಡು ಒಳಗೆ ಹೋಗಿ, ಅದನ್ನ ನನ್ನ ಮೇಜಿನಮೇಲೆ ಕೂರಿಸಿ, "ಆಗಂತುಕ" ಎಂಬ ಒಂದು ಪದ್ಯ ಬರೆದು "ಸಾಹಿತ್ಯಯತ್ನ" ಎಂಬ ಪತ್ರಿಕೆಗೆ ಕಳುಹಿಸುವುದು ಎಂದು ನಿರ್ಧರಿಸಿದೆ.

ನನ್ನ ಮನೆಗೂ ನೆರೆಮನೆಗೂ ನಡುವೆ ಇರುವ ಬೇಲಿಯ ಹತ್ತಿರ ಅಂಬೆಕಾಲಿಕ್ಕಿ ಕುಳಿತೆ. ಅಲ್ಲಿಂದಲೇ ಆ ಮಧುರ ಗಾನಕೇಳಿ ಬರುತ್ತಿದ್ದದ್ದು; ಗಿಡಗಳನ್ನು ಅಗಲಿಸಿ ಎಡಬಲ ನೋಡಿದೆ....

ಆಗ, ನೆರೆಮನೆ ಗೋವಿಂದರಾಯರು ಆಜೆ ಕಾಣಿಸಿದರು. ಉಶ್ಶ್! ಸುಮ್ಮನಿರಿ! ಅರ್ಧ ಗಂಟೆಯಿಂದ ಇದರೊಳಗಿಂದ ಒಂದು ಪಕ್ಷಿ ಟುವ್ವಿ-ಟುವ್ವಿ ಅಂತ ಕೂಗುತ್ತಿದೆ. ಅದನ್ನೋಡಿಸಬೇಡಿ! ನಾನು ಕೂಗಿದಾಗಲೆಲ್ಲ ಅದೂ ಉತ್ತರಕೊಡುತ್ತಾ ಇದೆ" ಎಂದರು.

---



# ಹೂಂ



"ಕೇಳು ಜನಮೇಜಯ ಧರಿತ್ರೀಪಾಲ!" ಹೂಂ, ನನ್ನ ಕಾವ್ಯಕ್ಕೆ ಒಂದು ಪಂಕ್ತಿಯನ್ನೂ ಒಂದು ಪ್ರಾಸವನ್ನೂ ದಯಪಾಲಿಸಿದಂಥಾ "ಭೂರಮಣ ಕೇಳ್!" ಹೂಂ. "ಚಿತ್ತವಿಸು ಜನಮೇಜಯ ಕ್ಷಿತಿಪೋತ್ತಮನೆ!" ಹೂಂ, ಚಿತ್ತವಿಸಿದೆ. "ಎಲೆ ಪರೀಕ್ಷಿತ ತನಯ ಕೇಳ್!" ಹೂಂ, "ಅರಸ ಕೇಳ್" "ಭೂಪ ಕೇಳೈ" "ಧಾರುಣೀಪತಿ ಕೇಳ್" ಹೂಂ.... ಹೂಂ....ಹೂಂ....

ಕಿವಿಗೊಟ್ಟು ಲಾಲಿಸುವ ಸಹೃದಯರಿಗೆ ಮಾತ್ರ ಜನಮೇಜಯ ಮಹಾರಾಜನ ಹೂಂಗುಟ್ಟುವಿಕೆ ಮಹಾಭಾರತದ ಉದ್ದಕ್ಕೂ ಕೇಳಿಬರುತ್ತದೆ. ಪಾಪ! ಮೊದಮೊದಲು ಅವರು ಸಹಜಕುತೂಹಲದಿಂದ ಹೂಂಗುಟ್ಟಿರಬೇಕು. ಆದರೆ ದಿನಗಳುರುಳಿ ವಾರಗಳು ಕಳೆದು ತಿಂಗಳುಗಳೂ ಸೇರಿ ವರ್ಷಾನುಗಟ್ಟಲೆ ಕಥೆ ಬೆಳೆದಾಗ, ಆತನ ತಾಳ್ಮೆಯೂ ಬತ್ತಿ ಹೋಗಿ ಮುನಿಗಳಿಗೆ ಸಲ್ಲಬೇಕಾದ 'ಹೂಂ'ಗಳನ್ನು ಅವರು ಪದೇ ಪದೇ ಅರ್ಪಿಸದೆ ತಾವೂ ಮುನಿಗಳಾಗಿರಬೇಕು. ಆಗ ವೈಶಂಪಾಯನು "ಜನಮೇಜಯ

ಮಹೀಪತಿ! ಕೇಳ್” “ಅರಸ! ಕೇಳ್ಳೈ!” “ಭೂಪ! ಕೇಳ್” ಎಂದು ಅವರನ್ನು ತಿವಿದೆಚ್ಚರಿಸಿ ತಾತಮುತ್ತಾತಂದಿರ ಪುರಾಣವನ್ನು ಪೂರೈಸಿರಬೇಕು.

ಅಂತೂ, ಕೌರವ ಪಾಂಡವರ ದುರಂತ ದಾಯಾದಿ ಮತ್ಸರದ ವಿಷಾದಮಯ ಕಥಾವಿಸ್ತಾರದಲ್ಲಿ ನಿಮಿಷನಿಮಿಷಕ್ಕೂ ಹೇಳಿಯೂ ಕೇಳಿಸದ ಈ ಹೂಂಕಾರವು ಚರಿತ್ರಾರ್ಹವಾದದ್ದು. ಮಾನವನ ಇತಿಹಾಸದಲ್ಲಿ ಹೂಂಕಾರವು ಅತಿ ಪ್ರಾಚೀನವಾದದ್ದು. ಅಷ್ಟೇಕೆ, ಓಂಕಾರಕ್ಕಿಂತ ಮೊದಲೇ ಹೂಂಕಾರ ಹುಟ್ಟಿತೆಂದು ಹೇಳಿದರೂ ತಪ್ಪಾಗಲಾರದು. ಏಕೆಂದರೆ ಮನುಷ್ಯಪ್ರಾಣಿ “ಬಾಯಿ ಬಿಡುವುದಕ್ಕೆ” ಕಲಿಯುವುದಕ್ಕೆ ಮುಂಚೆಯೇ, ಅಂದರೆ ಓಂಕಾರೋಚ್ಚಾರಣೆ ಮಾಡುವುದಕ್ಕೆ ಮುಂಚೆಯೇ, ಬಾಯಿ ಹಿಡಿದು ಹೂಂಕಾರವನ್ನು ಉಚ್ಚರಿಸಬಲ್ಲವನಾಗಿದ್ದ; ಉಚ್ಚರಿಸುತ್ತಲೂ ಇದ್ದ. ಎಂತಹ ಪಳಗಿದ ಓಂಕಾರಸಾಧಕನೂ ಕೂಡ ಬಾಯಿ ಮುಚ್ಚಿಕೊಂಡು ಪ್ರಣವವನ್ನು ಜಪಿಸಲಾರ. ಆದರೆ ಜನಮೇಜಯನಂತಹ ಹೂಂಕಾರ ಸಾಧಕರು ಬಾಯಿ ತೆರೆಯದೆ ತಮ್ಮ ಕೆಲಸವನ್ನು ಸಾಗಿಸಬಲ್ಲರು.

ಪ್ರಾಚೀನ ಯುಗದಲ್ಲಿ, ನಮ್ಮ ಹಿರಿಯರು ಸದಾ “ಮರ ಕೋತಿ” ಆಡುತ್ತಿದ್ದರೆಂಬುದು ನಿರ್ವಿವಾದವಾದ ಸಂಗತಿ. ಹುಟ್ಟಿದಹಬ್ಬದ ವೇಷಭೂಷಣಗಳನ್ನೇ ಸದಾ ತೊಟ್ಟು ಅವರು ಹಗಲಿರುಳೂ ಅರಳುಮರಳೆನ್ನದೆ ಕೊಂಬೆಯಿಂದ ಕೊಂಬೆಗೆ ನೆಗೆದು ಚಿಮ್ಮಿ ಕುಣಿದು ಕಿಚಿಕಿಚಿ ಧ್ವನಿ ಮಾಡುತ್ತಿದ್ದರು. ಆಗ ಅವರಲ್ಲಿ ಹಲವರು ಸಾಲಾಗಿ ಒಂದು ಕೊಂಬೆಯನ್ನು ಹಿಡಿದು ನೇತಾಡಿ, ಮತ್ತೊಂದು ಕೊಂಬೆಗೆ ಒಟ್ಟಿಗೆ ಹಾರಲು ಹವಣಿಸಿರಬೇಕು. ಎಲ್ಲರೂ ಒಂದೇ ಸಮನೆ ಉಸಿರು ಹಿಡಿದು ಕಾಲನ್ನು ಸೊಂಟದವರೆಗೂ ಮೇಲೆಳೆದು ಮೂತಿಯನ್ನು ಮುಂದಕ್ಕೆ ಚಾಚಿ ಮುಂದಾಳಿನ ಹೂಂಕಾರವನ್ನೇ ಎದುರು ನೋಡುತ್ತಿದ್ದಿರಬೇಕು. ನಾಯಕನು ಹೂಂಕರಿಸಿದ ಕೂಡಲೇ ಎಲ್ಲರೂ ಒಟ್ಟಿಗೆ ಹೂಂಕರಿಸಿ ತಮಗೆ ತಾವೇ ಉತ್ತೇಜನ ಕೊಟ್ಟುಕೊಂಡು ಮುಂದಕ್ಕೆ ಹಾರಿ ಕಿಲಕಿಲ ನಕ್ಕಿರಬೇಕು. ಹೀಗೆ ನಮ್ಮ ಹಿರಿಯರ ಹೂಂಕಾರವು ಮಹಾರಣ್ಯಗಳಲ್ಲೆಲ್ಲ ಪ್ರತಿಧ್ವನಿತವಾಯಿತು.

ಅನಂತರ, ಮಾನವನು "ಹೂಂ" ಎಂಬ ಒಂದು ಶಬ್ದದಲ್ಲೇ ವಿಧ ವಿಧವಾದ ಅರ್ಥಗಳನ್ನು ತುಂಬಿ ತುಳುಕಾಡಿಸಲು ಕಲಿತ. ಇತರರಿಗೆ ಕೆಚ್ಚನ್ನು ಕಲಿಸುವ "ಹೂಂ" ಒಪ್ಪಿಗೆಯನ್ನು ಸೂಚಿಸುವ ಹೂಂ, ಅನುಮಾನವನ್ನು ಅರುಹುವ ಹೂಂ, ಪ್ರಶ್ನೆಯನ್ನು ಪ್ರಕಟಿಸುವ ಹೂಂ, ಅಸಮ್ಮತಿಯನ್ನು ವ್ಯಕ್ತಗೊಳಿಸುವ ಹೂಂ— ಹೀಗೆ ಹೂಂಕಾರವು ನಾನಾ ರೂಪಗಳನ್ನು ತಾಳಿತು. ನೆಪೋಲಿಯನ್ನನ ಹೂಂಕಾರ, ಯುಲಿಸಿಸ್ಸನ ಹೂಂಕಾರ, ಶಿವಾಜಿಯ ಹೂಂಕಾರ, ಜನಮೇಜಯನ ಹೂಂಕಾರ, ಹೆಡ್ಮಾಸ್ತರಿಯ ಹೂಂಕಾರ, ಹೀಗೆ ಇವು ಮಾನವನ ಮಾತಿನ ಭಂಡಾರದಲ್ಲಿ ಹಲವಾರು ಬಗೆಯಿಂದ ಸೇರಿಕೊಂಡುವು.

ಅಲ್ಲದೆ, ಹೂಂ ಶಬ್ದದಲ್ಲಿ ದುರಹಂಕಾರವನ್ನೂ ಕಾಮ ಕ್ರೋಧ ಮದ ಮೋಹಗಳನ್ನೂ ತುಂಬಲು ಮಾನವನಿಗೆ ಸಾಧ್ಯವಾಯಿತು.

"ಧನಮದದಿ ಸತ್ಕುಲಮದದಿ ಯೌ
ವನ ಮದದಿ ಸಿರಿಮದದಿ ನಿಜಗುರು
ವನು ವಿಭಾಡಿಸಿ ನೀನು ತಾನೆಂದೆನುತ ಹೂಂಕರಿಸಿ"

ದುಂಡಾವರ್ತಿ ಮಾಡುವುದನ್ನು ಮಾನವನು ಅಭ್ಯಾಸ ಮಾಡಿಕೊಂಡ. ಈ ಹೂಂಕಾರಕ್ಕೂ, ಶ್ರೀಕೃಷ್ಣನು ತೊಟ್ಟಿಲ ಮಗುವಾಗಿದ್ದಾಗ,

"ರಾಮೋ ನಾಮ ಬಭೂವ" ಹುಂ,
"ತದಬಲಾ ಸೀತೇತಿ" ಹುಂ!

ಎಂದು ಪೂರ್ವಜನ್ಮ ಸ್ಮರಣೆಯಿಂದಲೋ, ಮಗುತನದ ಸರಳತೆಯಿಂದಲೋ ಹೂಂಗುಟ್ಟಿದ್ದಕ್ಕೂ ತಾರತಮ್ಯವೇ ಇಲ್ಲ.

ಒಂದು ವೇಳೆ ಹೂಂ ಎಂದು ಕೊಂಚ ಉಕಾರವನ್ನು ಉದ್ದ ಮಾಡದೆ, ವೇಗವಾಗಿ "ಹೂಂ ಹೂಂ" ಎಂದು ದಡಬಡಿಸಿದರೆ, ಶ್ರೋತೃವಿನ ಉತ್ಸಾಹ ಸ್ಪಷ್ಟವಾಗುತ್ತದೆ. "ಮುಂದಕ್ಕೆ ಏನಾಯಿತು? ಬೇಗ ತಿಳಿಸಿ? ರಾಜಕುಮಾರಿ ರಾಜ್ಯಕ್ಕೆ ಮಾರಿಯಾದಳೆ? ಭಟ್ಟರ ಜನಿವಾರ ಕಿತ್ತು ಹೋಯಿತೆ? ಗುಂಡಮ್ಮನವರು ಬದುಕಿದರೆ?" ಎಂಬ ಆತುರತೆ ಸ್ಫುರಿಸುತ್ತದೆ. ಅಸಹ್ಯವಾದ ಒಂದು ನೀಳ್ಗವನವನ್ನು ಗೀಚಿ ಅದನ್ನು ಕೇಳುವವರು ಸಿಗದೆ ನಮ್ಮನ್ನು ಹಿಡಿದು ಕೂರಿಸಿದಾಗ ನಾವು ಮಾಡುವ ನರಳು ಹೂಂಕಾ

ರಕ್ಕೂ, ಜ್ವರದ ದಾಳಿಯಿಂದ ಹಾಸಿಗೆ ಹಿಡಿದಾಗ ನಮ್ಮಿಂದ ಹೊರ ಹೊಮ್ಮುವ ಹೊಂಕಾರಕ್ಕೂ ತೀರ ಹತ್ತಿರದ ಸಂಬಂಧ. "ಹೂಂ! ನಡಿಯಲಿ! ನಿನ್ನ ಕೈಗೆ ಸಿಕ್ಕಿ ಬಿದ್ದಿದೇವೆ. ಆದಷ್ಟು ಜೀವ ಹಿಂಡು" ಎಂಬ ಅರ್ಥ ಎರಡರಲ್ಲೂ ಇದೆ.

ಹೀಗೆ ಮಾನವನ ಇತಿಹಾಸದಲ್ಲಿ ಬಹುಕಾಲ ಬರಿಯ ಹೂಂಕಾರದಿಂದಲೇ ಜೀವನ ಸಾಗಿರಬೇಕು. ನಿತ್ಯದ ಎಲ್ಲಾ ಆವಶ್ಯಗಳಿಗೂ ಹೂಂಕಾರವನ್ನೇ ನಮ್ಮ ತಾತ ಮುತ್ತಾತಂದಿರು ಅಳವಡಿಸಿಕೊಂಡಿರಬೇಕು. 'ಆಗಬಹುದು' ಎಂದು ಸಮ್ಮತಿನೀಡುವ ಹೂಂ ಶಬ್ದದ ರಚನೆಯಲ್ಲೇ ನೂರಾರು ವೈವಿಧ್ಯಗಳಿವೆ! ನಲ್ಲೆಯ ಹೂಂಕಾರದ ಇಂಪನ್ನೂ, ತಿಳಿಯಾದ ನಿಷ್ಕಲ್ಮಷವಾದ ಸೊಬಗನ್ನೂ ಕವಿಗಳೇ ವರ್ಣಿಸಬೇಕು; ಕಾಮುಕರೇ ವಿಂಗಡಿಸಬೇಕು. ಸಾಲಗಾರನ ಹೂಂನಲ್ಲಿರುವ ದೈನ್ಯ, ಸಾಹುಕಾರನ ಹೂಂ ನಲ್ಲಿರುವ ಧೋರಣೆ! ಆಫೀಸರುಗಳ ಹೂಂ ನ ಹಿಂದಿರುವ ದರ್ಪ, ಅತ್ತೆಯ ಹೂಂ ನ ಹಿಂದೆ ಅಡಕವಾಗಿರುವ ಬಾದಶಾಹಿತನ, ಮಾವನ ಹೂಂನ ಹಿಂದೆ ಕೇಳಿಬರುವ ಅಸಹಾಯತೆ ಇವುಗಳನ್ನು ವಿಚಾರಮಾಡಿದರೆ ಅರಿತುಕೊಳ್ಳಬಹುದು.

"ಎಷ್ಟು ಕೇಳಿದರೂ, ಚಂಡಾಲ, ಹೂಂ ಹೂಂ ಅಂತಾನೆಯೇ ಹೊರತು, ಹೂಂ ಅನ್ನುವುದಿಲ್ಲವಲ್ಲ" ಎಂದು ಚಂಡಾಲ ಪಿತರು ಚಿರಂಜೀವಿಯ ಮೇಲೆ ರೇಗುತ್ತಾರೆ. ಆದರೆ ಒಂದು ವೇಳೆ ಹುಡುಗ ಲೋಕಕ್ಕೆ ಬೆದರಿ, ಧರ್ಮಕ್ಕೆ ಕಟ್ಟುಬಿದ್ದು, ಆತ್ಮಹತ್ಯಕ್ಕೆ ಹೆದರಿ, ತಾಯಿಯ ಕಂಬನಿಗೆ ಕಂಗೆಟ್ಟು "ಹೂಂ" ಅಂದ, ಅನ್ನಿ! ಆ ಅನ್ನಾಣಿಕೆಯ ಸ್ವರೂಪ ಕೂಡ ವಿಚಿತ್ರವಾಗಿರುತ್ತದೆ. 'ಹ' ವಿನ ಹೊಕ್ಕುಳಿಂದ ಹೊರಡುವ ಊಕಾರದಂತೆ ಅವನ ಧ್ವನಿಯು ಕೂಡ ಬಾಗಿ ಬಗ್ಗಿ ಮುಳುಗಿ ತೇಲಿ ಗಾಳಿಯಲ್ಲಿ ಮಾಯವಾಗುತ್ತದೆ. ಇಂತಹ ಹೂಂಕಾರ ಕೇಳಿದಕೂಡಲೇ ಕೆಲಸ ನಡೆಸಬಾರದು. ಕೊಂಚ ದಿನ ತಡೆಯುವುದೇ ಮೇಲು. ಹಾಗಲ್ಲದೆ, "ಇನ್ನೇನು, ತಮ್ಮಯ್ಯನವರೇ! ಅಂತೂ ಇಂತೂ ಇವನ ಬಾಯಿಂದ ಹೂಂ ಅಂತ ಬಂತೋ ಇಲ್ಲವೋ? ಜೋಯಿಸರನ್ನು ಬರಹೇಳಿಬಿಡೋಣ" ಅಂದರೆ, ಮುಂದಕ್ಕೆ ಕೈ ಕೈ ಹಿಸುಕಿ ಫಲವಿಲ್ಲ. ಆಮೇಲೆ ಅವನೆದುರು ಅಂಗಲಾಚಿ ನಿಂತು, "ಲೋ! ನೀನು ಆಹೊತ್ತು ಹೂಂ ಅನ್ನಲಿಲ್ಲವೇನೋ? ನಿನ್ನ ಬಾಯಲ್ಲಿ

ಹೂಂ ಅನ್ನಿಸಿದಮೇಲಲ್ಲವೇನೋ ನಾನು ತಮ್ಮಯ್ಯನವರಿಗೆ ಮಾತುಕೊಟ್ಟು, ಇಷ್ಟೆಲ್ಲಾ ನಡೆದದ್ದು....ಅವತ್ತೇ ನೀನು ಹೂಂ ಅನ್ನದೆ, ಹೂಂ ಹೂಂ ಅಂದಿದ್ದರೆ...." ಅಂತ ನಾಲಿಗೆ ಬೀಸಿ ಫಲವಿಲ್ಲ. ಅವನು ಹೂಂ ಅಂತ ಹೇಳಿರಲಿಲ್ಲ; 'ಹೂಹೂಂ' ಅಂದ, ಅಷ್ಟೆ. ಆದರ ಅರ್ಥವೇ ಬೇರೆ.

ಒಂದುವೇಳೆ ಆ ಹುಡುಗ "ಹೂಹೂಂ" ಅನ್ನದೆ, "ಹುಂ" ಅಂತ ಹೇಳಿದ್ದರೂ ಕೂಡ, ತಂದೆಯೆನಿಸಿಕೊಂಡವರು ಜಾಗರೂಕರಾಗಿರಬೇಕಾಗಿತ್ತು. ಏಕೆಂದರೆ, ಹಲವರು ಸಮಸ್ಯೆಯ ಹಿಟ್ಟನ್ನು ಆಲೋಚನೆಯ ಕಾವಲಿಗೆ ಹುಯ್ದು ಬೇಯಿಸಿ ಮಗುಚಿ ಹಾಕಿ ವಿನಯವೆಂಬ ಸಾಟಿನಿಂದ ಮೇಲೆತ್ತಿ ಸಭ್ಯತೆ ಎಂಬ ಚಟ್ನಿಸಹಿತವಾಗಿ ಬಿಡಿಸುವುದಿಲ್ಲ. ಥಟಕ್ಕನೆ 'ಹುಂ' ಅಂದುಬಿಡುತ್ತಾರೆ. ಅವರ ಹೂಂಕಾರದ ಅರ್ಥ, 'ಹಾಳಾಗಿ ಹೋಗಲಿ' ಅಂತ; ನೆಟ್ಟಗಾಗಲಿ, ಅಂತಲ್ಲ! ಅದರಲ್ಲಿ ಮೂದಲಿಕೆಯ ಮುದ್ದೆ ಇದೆ; ಕಲ್ಲೆದೆಯ ಕಠೋರತೆಯಿದೆ. ಆದ್ದರಿಂದ, ತಕ್ಷಣವೇ ನಾವು "ಹಾಗಲ್ಲ, ಕಣೋ, ಬಾರೋ ಇಲ್ಲಿ! ನೀನು ಹಾಗಂದರೆ ಹೇಗೋ? ಹೀಗೆ ಹೀಗೆ ಇದೆಯಲ್ಲೋ ಸಮಾಚಾರ? ಸರಿಯಾಗಿ ಹೇಳೋ? ಹೂಂ ಅನ್ನೋ" ಅಂತ ತಲೆ ಸವರಲೇಬೇಕು....ಕೈಗಡಿಯಾರವನ್ನು ಕಳೆದುಕೊಂಡು ಪೇಚಾಡಿ, ಮಸಿಕುಡಿಕೆಯೊಳಗೂ ಕೂಡ ತಡಕಾಡಿ, ಕಡೆಗೆ ಅಗಸನು ಅದನ್ನು ಅಂಗಿಸಹಿತವಾಗಿ ಮಡಿಮಾಡಲು ಒಂಡೆಗೆ ಬಡಿದ ಅಂತ ತಿಳಿದಾಗ ಹೂಂಕರಿಸಿ ಮಂಚದ ಮೇಲೆ ಮಲಗುವುದಿಲ್ಲವೆ, ನಾವು? ಆ ರೀತಿಯ 'ಹುಂ' ಅವನ ಹಿಂದಿನ ಹುಂ. ಅದನ್ನು ಪುನರ್ಮುದ್ರಿಸಿ ನಗುಮೊಗದ 'ಹೂಂ' ಮಾಡಿದ ಅನಂತರ ಲಗ್ನಪತ್ರಿಕೆ ಅಚ್ಚು ಮಾಡುವುದು ಉಭಯ ತಾಪಿ ಕ್ಷೇಮ.

ಹೀಗೆ ಹೂಂಕಾರದ ಹುಟ್ಟು, ಹೂಂಕಾರದಲ್ಲಿ ಕೇಳಿಬರುವ ವಿವಿಧ ವಿಲಾಸಗಳು ಇವುಗಳನ್ನು ಕುರಿತು, ಯಾರಾದರೂ ಹೂಂಗುಟ್ಟುತ್ತಿರುವ ತನಕ ಹೇಳಬಹುದು. ಹೂಂಕಾರದಲ್ಲಿ ಓಜಸ್ಸಿದೆ; ರಸವಿದೆ; ಅನಿರ್ವಚನೀಯವಾದ ಅಂತಃಶಕ್ತಿಯಿದೆ. ಅದರಿಂದಲೂ ಪರಲೋಕಸಾಧನೆಯಾಗುವುದು. ಏಕೆಂದರೆ, "ಹೂಂ! ನೀನು ಮಾಡಿಸುವುದನ್ನೆಲ್ಲಾ ಮಾಡುತ್ತಿರುತ್ತೇನೆ. ಊಹೂಂ ಅಂತ ಹೇಳಲು ನಾನು ಎಷ್ಟರವನು ಟ್ಟೆನವನು" ಎಂಬುದು

ಮೋಕ್ಷಕ್ಕೆ ಒಂದು ದಾರಿ; ಮಾರ್ಜಾಲ ಕಿಶೋರನ ದಾರಿ. ಅಲ್ಲದೆ, ಹೊಂಕಾರದಿಂದ ಇಹಲೋಕದ ವ್ಯವಹಾರಜೀವನದಲ್ಲಿ ಸುಖಶಾಂತಿಗಳು ಸಿಗುವುವು. ಮೇಲಧಿಕಾರಿಗಳು ಹೇಳಿದ್ದಕ್ಕೆಲ್ಲ ಹೊಂ ಅನ್ನುತ್ತಿದ್ದರೆ ಅವರಿಗೂ ತೃಪ್ತಿ; ನಮಗೂ ಬಡ್ತಿ. ಹೀಗೆ ಹೊಂಕಾರ ಇಹಪರಗಳನ್ನು ಸಾಧಿಸಿಕೊಡುತ್ತದೆ. ಒಟ್ಟಿನಲ್ಲಿ ಓಂಕಾರಕ್ಕಿಂತ ಹೊಂಕಾರವೇ ಪ್ರಾಚೀನ; ಪ್ರಯೋಜನಕರ!... ಹೊಂ, ಅನ್ನಿ!

---

ಆಸ್ತಿಗಾರನ ಡೊಂಕು ೧೫

# ಹೊಸಾ ಹೊಸದು



ಪರಂಗಿಯವರೂ ನಮ್ಮ ಹಾಗೆಯೇ ಪಂಚಭೂತಗಳಿಂದಲೇ ರಚಿತ. ಷಡ್ರಸಗಳಿಂದ ಮೈಬೆಳೆಸಿ ನವರಸಗಳಿಂದ ಮನತಣಿಸಿ, ನಮ್ಮಂತೆಯೇ ಅವರೂ 'ಬುವಿಯ ಬಸಿರೊಳಗಿಳಿವರ್!' ಆದರೂ ಅವರ ಪುರುಷಾಯುಸ್ಸು ನಮ್ಮ ದೇಶದ ಸ್ತ್ರೀ ಆಯುಸ್ಸಿಗಿಂತ ಹೆಚ್ಚು! ಇದರ ಗುಟ್ಟೇನೆಂಬುದು ನನಗೆ ನಿನ್ನೆ ಹೊಳೆಯಿತು; ನಿಮಗೂ ತಿಳಿಸುತ್ತೇನೆ. ಅವರು ಪಾದರಕ್ಷೆಗಳನ್ನು ಕಳಚದಿರುವುದೇ ಅವರ ಆಯುರ್ಭಾಗ್ಯದ ಅಡಿಪಾಯ. ನಾವು ಎಷ್ಟು ಸಲ ಆಯುಷ್ಕರ್ಮ ಮಾಡಿಸಿಕೊಂಡರೂ ಅವರನ್ನು ಮೀರಿಸಲು ಸಾಧ್ಯವಾಗದಷ್ಟು ವರ್ಷ ಅವರು ಬದುಕಿ ಬಾಳುವುದಕ್ಕೆ, ಪಾದರಕ್ಷೆಗಳೇ ಕಾರಣ.

ಅಲ್ಲಿ ಜನ ಬೂಟ್ಸು ಹಾಕಿಕೊಂಡೇ ಹುಟ್ಟುತ್ತಾರೆ. ಅದನ್ನು ಬಿಚ್ಚದೆಯೇ ತೆವಳುತ್ತಾರೆ; ತೊದಲುತ್ತಾರೆ; ಊಟ ಮಾಡುತ್ತಾರೆ; ದೇವಸ್ಥಾನಕ್ಕೂ ನುಗ್ಗುತ್ತಾರೆ. ಅದನ್ನು ಧರಿಸಿಕೊಂಡೇ ಪರಲೋಕಕ್ಕೆ ಪ್ರಯಾಣ ಬೆಳೆಸುತ್ತಾರೆ. ಗರುಡ ಪುರಾಣದ ಕಲ್ಲುಮುಳ್ಳುಗಳನ್ನು ಸುನಾಯಾಸವಾಗಿ

ದಾಟಿ ಹೋಗುತ್ತಾರೆ....ನಾವು ಕಾಲಿಗೆ ಚರ್ಮವನ್ನೇ ಬಿಗಿಸುವುದಿಲ್ಲ; ಲಾಳವಂತೂ ಮೊದಲೇ ಇಲ್ಲ. ನಮ್ಮ ಜನದ ಬರಿಯ ಕಾಲುಗಳನ್ನು ಬಡುಕಿನ ಹಾದಿಬೀದಿಗಳ ಸಂದುಗೊಂದುಗಳ ಸಾವಿರಾರು ಕಂಟಕಗಳು ಚುಚ್ಚಿ ನೋಯಿಸುತ್ತವೆ. ಅವರ ಹಾಗೆ ನಾವು ಎಲ್ಲಿಂದರಲ್ಲಿ ಕಾಲಿಡುವ ಹಾಗಿಲ್ಲ. ಅಥವಾ, ನಾಗರಿಕರಾದ ಹಲವರು ಚಪ್ಪಲುಗಳನ್ನು ಧರಿಸಿದರೂ ಕೂಡ, ಅವುಗಳನ್ನು ಆಗಾಗ ಕಳಚಿ ಅಲ್ಲಲ್ಲೇ ಬಿಟ್ಟು ಅವುಗಳಿಗಾಗಿ ಪೇಚಾಡಿ ತಡಕಾಡಿ ಅದಲುಬದಲಾದಾಗ ಹಿಗ್ಗಿ ಕುಗ್ಗಿ ಕಳೆದಾಗ ಮನನೊಂದು ಕೊರಗಿ ಕೆರಳಿ ಕಾಯಿಲೆ ಬಿದ್ದು ಬರಿಯ ಕಾಲಲ್ಲೇ ಬ್ರಹ್ಮಲೋಕಕ್ಕೆ ಬಿಜಯ ಮಾಡುತ್ತೇವೆ. ಪಾದರಕ್ಷೆಗಳ ರಕ್ಷಣೆಯಲ್ಲೇ ನಮ್ಮ ಜಾಗ್ರದವಸ್ಥೆಯ ಅರ್ಧ ಮುಕ್ಕಾಲು ಭಾಗವೆಲ್ಲ ವ್ಯಯವಾಗುತ್ತದೆ. ಚಪ್ಪಲಿ ಹಾಕಿಕೊಂಡದ್ದೇ ತಡ, ಅವುಗಳನ್ನು ತೆಗೆದಿರಿಸುವ ಪ್ರಮೇಯ ತೆಗೆದಿರಿಸಿದ್ದೇ ತಡ, ಹುಡುಕುವ ಗೋಳು, ಹೀಗೆ ನಾವು ಅವುಗಳಿಂದಲೇ ಬಾಡಿ ಬೆಂಡಾಗುತ್ತಿದೇವೆ. ನಮ್ಮ ‘ಬಾಡಿ’ ಕೂಡ ‘ಬೆಂಡಾ’ಗುತ್ತದೆ.

ಮಹಡಿ ಮೆಟ್ಟಲಿನ ಕೆಳಗೆ ಚಪ್ಪಲುಗಳನ್ನು ಬಿಟ್ಟು, ಮೇಲೆ ಮನೆ ಮಾಡಿರುವ ಗೆಳೆಯನ ಸಂಗಡ ಸರಸಸಲ್ಲಾಪ ಮಾಡಲು ನಮಗೆ ನೆಮ್ಮದಿ ಎಲ್ಲಿಂದ ಬರಬೇಕು. ಗುಡಿಯ ಹೊರಬಾಗಿಲಿನಾಚೆ ಜೋಡುಗಳನ್ನಿರಿಸಿದ ಮೇಲೆ ತದೇಕಧ್ಯಾನವಲ್ಲಿ ದೇವರೆದುರು ನಿಂತು, “ಮನಸಾಭೀಷ್ಟ ಪ್ರಾರ್ಥನಾಂ ಸಮರ್ಪಯಾಮಿ,” ಸಾಧ್ಯವೆ? “ದೇವರೇ! ನನ್ನ ಪಾದರಕ್ಷೆಗಳನ್ನು ಶುನಕರಿಂದಲೂ ಹಾರಕರಿಂದಲೂ ಉಳಿಸಿಕೊಂಡು” ಎಂಬುದೊಂದೇ ಆಗ ನಮ್ಮ ಹೃದಯಾಂತರಾಳದಿಂದ ಹೊರಚಿಮ್ಮುವ ಚೀತ್ಕಾರ. ನಾವು ಬೆವರು ಸುರಿಸಿ ಚರ್ಮ ಸವೆಸಿ ಸಂಪಾದಿಸಿ ತಂದ ನಮ್ಮ ಸ್ವತ್ತಾದ ಚಪ್ಪಲುಗಳನ್ನು, ನಮ್ಮಿಂದ ದೂರಮಾಡಿ, ಎಲ್ಲೋ ಬೇರಿರಿಸಿ, ಅನಾಥ ಶಿಶುಗಳಂತೆ ಯಾರ ಹೊಸಲಲ್ಲೋ ಬಿಡಿಸಿ, ಕಡೆಗೆ ಅವುಗಳನ್ನು ಪರರ ಪಾಲುಮಾಡುವ ಈ ನಮ್ಮ ಸಮಾಜದ ಸಂಪ್ರದಾಯವನ್ನು ಎಷ್ಟು ಕಟುವಾಗಿ ಟೀಕಿಸಿದರೂ ಸಾಲದೆನಿಸುತ್ತದೆ.

ಮೊನ್ನೆ ನನ್ನ ಆಪ್ತ ಪ್ರಾಚೀನಾವೀಥಿ ಒಬ್ಬ ಮನೆಗೆ ಬಂದ (ಅಂದರೆ, ಹಿಂದೆ ನಾನೂ ಅವನೂ ಒಂದೇ ಬೀದಿಯಲ್ಲಿದ್ದವರು; ಲಂಗೋಟಿ

ಸ್ನೇಹಿತರು ; ಗಳಸ್ಯ ಕಂಠಸ್ಯ, ಎಂದರ್ಥ) 'ಬಂದ', ಏನು ? ನಾನೇ ಬಾ ಅಂತ ಕಾಗದ ಬರೆದಿದ್ದೆ. ನಾಲ್ಕು ದಿನ ಒಟ್ಟಿಗಿದ್ದು ಹಿಂದಿನ ಸವಿನೆನಪುಗಳನ್ನ ಮತ್ತೊಮ್ಮೆ ಮೆಲುಕುಹಾಕಿ ಹೋಗು ಅಂತ ಕರೆದಿದ್ದೆ. ಅವನ ಜಟಕಾ ಮನೆಬಾಗಿಲಿಗೆ ಬಂದುನಿಂತಾಗ, ಮೊತ್ತಮೊದಲು ಅದರೊಳಗಿಂದ ಹೊರಕ್ಕೆ ಬೀಳಬೇಕಾದ ಪದಾರ್ಥ ಬೀಳಲಿಲ್ಲ. ನನಗೆ ಆಶ್ಚರ್ಯವಾಯಿತು. ಸಾಮಾನ್ಯವಾಗಿ ಗಾಡಿಯಲ್ಲಿ ಯಾರು ಬಂದರೂ ರಸ್ತೆಗೆ ಇಳಿಯುವಮೊದಲು ಚಪ್ಪಲುಗಳನ್ನೆಸೆಯುತ್ತಾರೆ. ಅವುಗಳ ಸಂಖ್ಯೆ, ಆಕಾರ, ಆಯುಸ್ಸು ಇವುಗಳಿಂದ, ಬಂದ ಅತಿಥಿಗಳ ಸಂಖ್ಯೆ, ಸ್ಥೂಲ, ಸೂಕ್ಷ್ಮ ಪರಿಚಯ, ಆರ್ಥಿಕ ಸ್ಥಿತಿ, ನಾಗರಿಕತೆಯ ಮಟ್ಟ, ಇವುಗಳನ್ನೂ ಕೂಡ ನಾವು ಅರಿತುಕೊಳ್ಳಬಹುದು. ಆ ದಿನ ಚಪ್ಪಲಿ ಹೊರಕ್ಕೆ ಬೀಳಲಿಲ್ಲ. ಅವನೇ ಇಳಿದ ; ಸಾಮಾನುಗಳನ್ನೂ ಇಳಿಸಿದ. ಆ ಸಮಾಗಮದ ಗಡಿಬಿಡಿಯಲ್ಲಿ ನಾನು ಎಲ್ಲವನ್ನೂ ಮರೆತೆ. ಗೆಳೆಯನನ್ನು ತಬ್ಬಿಕೊಂಡು ಓಲಾಡಿದೆ. "ಬಾರಯ್ಯಾ, ಭೂಪತಿ ! ಚಹಾ ಮಾಡಿಸಲೇ ? ಕಾಫಿ ಬೇಕೆ ? ಬಾ! ಕೂತುಕೊ !" ಎಂದು ಒರಲಿದೆ. ನನ್ನ ಉಪಚಾರದ ಮಾತುಗಳನ್ನು ಕಿವಿಗೆ ಹಾಕಿಕೊಳ್ಳದೆ, ಆತ "ಹೇ ! ಜಟ್ಕಾ ! ಹೇ ಜಟ್ಕಾ !" ಎಂದು ಅರಚುತ್ತಾ ಅದರ ಹಿಂದೆ ಓಡಿದ. ಕುದುರೆಗೋ ಮನೆಕಡೆ ರಸ್ತೆ! ಹುರುಳಿ ಹೊತ್ತು ! ಚಕ್ರಕ್ಕೆ ಕಡ್ಡಿ ಕೊಟ್ಟು ಕಟಕಟವೆನಿಸಿದ್ದ ಭರಾಟೆ!.... ಬೆಪ್ಪು ಮೋರೆ ಸಹಿತವಾಗಿ ಹಿಂದಕ್ಕೆ ಬಂದ. "ಹೋಯಿತು! ಹೊಸಾಹೊಸದು ! ಹೋಯಿತು !" ಎಂದು ಕುರ್ಚಿಯೊಳಕ್ಕೆ ಬಿದ್ದ. "ಹೊಸಾಹೊಸ ಚಪ್ಪಲು" ಎಂದು ಹೇಳುತ್ತಲೇ ಊಟಮಾಡಿದ. "ಚಪ್ಪಲು, ಚಪ್ಪಲು" ಎಂದು ಜಪಿಸುತ್ತಲೇ ತಾಂಬೂಲ ಹಾಕಿಕೊಂಡ. ನಾನು ಅತ್ತಲಾಗಿ ತಿರುಗಿನಿಂತಿದ್ದಾಗ, ನಮ್ಮ ಮನೆ ಚಪ್ಪಲಿಗಳನ್ನೆಲ್ಲ ಒಂದು ಸಾರಿ ಪರೀಕ್ಷಿಸಿದ! ಎಲ್ಲರ ಮೇಲೂ ರೇಗಿಬಿದ್ದು, ನನ್ನ ಸಣ್ಣ ಮಗು ಮೂಗಿನಮೇಲೆ ಹೊಡೆದು, ಸಂಜೆ ರೈಲಿಗೆ ಊರಕಡೆ ಹೊರಟೇಬಿಟ್ಟ. ಹೀಗಾದರೆ, ಆಯುಸ್ಸು ಕಡಿಮೆ ಆಗದೆ ಹೇಗೆ?

ನಿಧಾನವಾಗಿ ನಾಲ್ಕುದಿನಗಳಿದ್ದು ಆನಂತರ ಹೊರಡುವವರ ಪಾಡು ಕೂಡ ಇಷ್ಟೇ ! "ನಮಸ್ಕಾರ ! ಹೋಗಿಬರುತ್ತೇನೆ. ವಿಶ್ವಾಸವಿರಲಿ. ನಮ್ಮೂರಿಗೆ ಬಂದಾಗ ತಾವು ಇನ್ನೆಲ್ಲೂ ಬಿಡಾರಮಾಡಕೂಡದು...." ಎಂದು

ಹೇಳಿ, ಹೊಸಲುದಾಟಿ ನಾಲ್ಕು ಹೆಜ್ಜೆ ನಡೆದು ಗಾಡಿಯೊಳಕ್ಕೆ ಕೊಡೆ ಯನ್ನೆಸೆದು, ಒಂದು ಕಾಲನ್ನೆತ್ತಿ ಮೆಟ್ಟಿಲೊಂದಕ್ಕೆ ಹುಮ್ಮಸ್ಸು ಕೊಡುವ ಸುಮುಹೂರ್ತದಲ್ಲೇ, "ಅಯ್ಯೋ!" ಎಂದು ಕಿರಲುವರು! ಥಟಕ್ಕನೆ ಹಿಂದಕ್ಕೆ ಬಂದು ಜಗುಲಿಯ ಮೂಲೆ, ಬಾಗಿಲಸಂದು, ಕುರ್ಚಿಯ ತಳ, ಎಲ್ಲವನ್ನೂ ಮೂಸುತ್ತಾ ಓಡಾಡುವರು. "ಏಕೆ? ಏನು?" ಎಂದು ನಾವು ಕೇಳಬೇಕಾಗಿಯೇ ಇಲ್ಲ. "ಚಪ್ಪಲು.... ತಂದಿದ್ದರೇನು? ಎಲ್ಲಿಟ್ಟಿರಿ?" ಅಂತ ನಾವೇ ಪ್ರಶ್ನೆ ಮಾಡಿಬಿಡಬಹುದು. ಕಡೆಗೆ ಆತ ಖಿನ್ನಮನಸ್ಕನಾಗಿ ಬಂದದ್ದಕ್ಕಿಂತ ಇಮ್ಮಡಿ ಭಾರವಾಗಿ ಮೆಲ್ಲಮೆಲ್ಲನೆ ಸರಿದು ಅಳುತ್ತಾ ಗಾಡಿ ಯೊಳಗೆ ಕುಳಿತುಕೊಳ್ಳುವನು. ನಮಗೂ ಅವನಿಗೂ ಹುಡುಗರ ಮೇಲೂ ಮನೆ ಆಳುಗಳ ಮೇಲೂ ಜಾಲವಾಡಿಸುತ್ತಾ ನಾಲಿಗೆ ನೀಡಿ ನಿಂತಿರುವ ನಾಯಿಯ ಮೇಲೂ ಇಲ್ಲದ ಸಲ್ಲದ ಅನುಮಾನಗಳು! ಅವರೆಲ್ಲರನ್ನೂ ಗದರಿಸಿ ಮನೆಯೆಲ್ಲ ಹುಡುಕಿಸುವುದು ನಮ್ಮ ಮುಂದಿನ ಕೆಲಸ. "ಅವನ ಜಾಪಾಸು ಸಿಕ್ಕರೆ, ಟಪಾಲಿನ ಮೂಲಕವಾದರೂ ವಾಪಸ್ ಮಾಡುತ್ತೇನೆ" ಎಂದು ನಾವು ನಿರ್ಧರಿಸುತ್ತೇವೆ. ಕಡೆಗೂ ಹಾಳು ಪಾದರಕ್ಷೆಗಳು ಸಿಗು ವುದೇ ಇಲ್ಲ. ನಾವು ಕಳ್ಳರು ಎಂದು ಆತ, ಆತ ತರಲೇ ಇಲ್ಲ ಎಂದು ನಾವು, ಹೀಗೆ ಆಜನ್ಮದ್ವೇಷವನ್ನುಂಟುಮಾಡುತ್ತದೆ, ಹಾಳು ಕಾಲಿನದು.

ಅತಿಥಿಗಳ ಜೋಡು ಮಂಗಮಾಯವಾದರೆ ನಮ್ಮಂತೆ ಎಲ್ಲರೂ ಪರಿ ತಪಿಸುವುದಿಲ್ಲ. ಅಮಿಲ್ದಾರರೊಬ್ಬರಿದ್ದರು. ಮುಖ್ಯವಾದ ಒಂದು ಕಾಗದ ಪತ್ರಕ್ಕೆ ತಾವು ಎಲ್ಲಿ ರುಜು ಹಾಕಬೇಕೆಂದು ತೋರಿಸಿಕೊಡಲು ಅವರು ಒಂದು ದಿನ ಗುಮಾಸ್ತೆಯರನ್ನು ಮನೆಗೆ ಬರಹೇಳಿದ್ದರು. ಹೊರಬಾಗಿಲಲ್ಲಿ ಚಪ್ಪಲುಗಳನ್ನು ತ್ಯಜಿಸಿ ಅವರು ಒಳಕ್ಕೆ ನುಗ್ಗಿದರು. ಅದನ್ನೇ ನೋಡು ತ್ತಿದ್ದ- ಅಮಿಲ್ದಾರರ ನಾಯಿ ಒಂದೊಂದನ್ನಾಗಿ ಎತ್ತಿಕೊಂಡು ಹೋಗಿ ಎಳೆದಾಡಿ ಕಿತ್ತು ಹರಿದು ತನಗೆ ತಾನೇ ಬೊಗುಳಿಕೊಂಡು ಕುಣಿದಾಡಿತು. ರಾಯರು ಹೊರಗೆ ಬಂದು, "ನಿಮ್ಮದೇನ್ರಿ, ಚಪ್ಪಲಿ?" ಅಂದಾಗ, ಗುಮಾಸ್ತೆಯರು "ಹೊಸಾ ಹೊಸದು!" ಅಂದರು. "ಹ....ಹ್ಹ....ಹ್ಹ" ಎಂದು ನಗುತ್ತಾ ಅವರು ತಮ್ಮ ನಾಯಿಯನ್ನು ಬಿಗಿದಪ್ಪಿ ಮುದ್ದಾಡಿದರು. ಕೋಪದಿಂದ ಕೆಂಪಾದ ಗುಮಾಸ್ತರು ತುಳಿದ ದಾರಿಯಲ್ಲಿ ಮುಳ್ಳಿಲ್ಲ, ಎಂದು ಬರಿಯ ಕಾಲಲ್ಲೇ ಬಂದ ರಸ್ತೆ ಹಿಡಿದರು.

ಪಾದರಕ್ಷೆಗಳನ್ನು ಕಳೆದುಕೊಂಡವರನ್ನು ಯಾವ ವೇದಾಂತದಿಂದಲೂ ಸಂತೈಸಲಾಗುವುದಿಲ್ಲ. ಕಡೆಯಪಕ್ಷ, ಸಾವಿರ ಜನರ ಸಂಗಡಲಾದರೂ ತಮ್ಮ ಗೋಳನ್ನು ಕರೆದ ಹೊರತು ಅವರಿಗೆ ಸಮಾಧಾನವಾಗಲಾರದು. ರೈಲುಡಬ್ಬಿಯೊಳಗೆ ಕುಳಿತಾಗಲೂ "ಇಲ್ಲೇ, ಸ್ನೇಹಿತನ ಮನೆ ಜಗುಲಿಯಲ್ಲೇ ಇರಿಸಿದ್ದೆ. ಹೋಯಿತು ಸಾರ್, ಹೊಸಾ ಹೊಸದು" ಎಂದು ಗೊಣಗುವರು. ಅಂಗಡಿಗೆ ಹೋದರೆ, "ಮೊನ್ನೆ ತೆಗಿದುಕೊಂಡೆನಲ್ಲಾ ಹೊಸಾ ಹೊಸದು....ಹೋಯಿತು, ಸ್ವಾಮಿ!" ಎಂದು ರೋದಿಸುವರು. "ನೋಡು, ರಾಮು! ನನಗೆ ಲಭ್ಯವಿಲ್ಲ. ನನ್ನ ಶಿರೋಲಿಖಿತ ಕಾಲಿಗೆ ಬಡಿಯಿತು! ಹೋಯಿತು, ಹೊಸಾ ಹೊಸದು!" ಎಂದು ಸ್ನೇಹಿತರಿಗೆಲ್ಲ ವರದಿ ಒಪ್ಪಿಸುವರು. ಸಾವಿರ ಸ್ಟೈಲಿ ಸವೆದಿದ್ದರೂ ರಜತ ಮಹೋತ್ಸವಕ್ಕೆ ಸಿದ್ಧವಾಗಿದ್ದರೂ ಕಳೆದುಕೊಂಡ ಪಾದರಕ್ಷೆಗಳೆಲ್ಲವೂ "ಹೊಸಾ ಹೊಸದು!" ....ಅವುಗಳ ಮೇಲೆ ಮನುಷ್ಯನಿಗೆ ಎಷ್ಟು ಮಮತೆ? ಎಷ್ಟು ಮೋಹ! ಹೋದ ಜೋಡುಗಳನ್ನು ಹೊಗಳುತ್ತಾ ಇತರರ ಕಿವಿಗಳನ್ನು ತೂತು ಮಾಡುವರು.

ಹೀಗೆ, ಪಾದರಕ್ಷೆಗಳ ರಕ್ಷೆಗಾಗಿ ಚಿಂತಿಸುತ್ತಾ, ಅವುಗಳ ನಷ್ಟಕ್ಕಾಗಿ ಮರುಗುತ್ತಾ, ಮನುಷ್ಯ ಎಷ್ಟು ವರ್ಷ ತಾನೆ ಬದುಕಿಯಾನು?

---

ಕೊಡುಗೈಯ ಡೊಂಕು ೧೬

# ದಾನಮಾನ



ನಮ್ಮೂರಲ್ಲಿ ಒಂದು ವಾಚನಾಲಯ ತೆರೆಯಬೇಕೆಂಬ ಮಹದುದ್ದೇಶದಿಂದ ಹಲವು ಸಭ್ಯಗೃಹಸ್ಥರನ್ನು ಶ್ರೀಮಾನ್ ರಾಮರಾಯರು ಮೊನ್ನೆ ಆಹ್ವಾನಿಸಿದರು. ನಾನೂ ಆಹ್ವಾನಿತನಾಗಿದ್ದೇನೆಂದು ವಿನಯದಿಂದ ಬಿನ್ನ

ಪಿಸಿಕೊಳ್ಳುತ್ತೇನೆ. ಮೊದಲು ರಾಮರಾಯರು ವಾಚನಾಲಯದ ಆವಶ್ಯ
ಕತೆಯನ್ನೂ ಅದರಿಂದಾಗಬಹುದಾದ ನಾಡ ಮತ್ತು ನುಡಿಯ ಸೇವಾ
ಕಾರ್ಯವನ್ನೂ ಹೃದಯಂಗಮವಾಗಿ ವಿವರಿಸಿದರು. ಚಂದಾಪಟ್ಟಿ ನನ್ನ
ಕಡೆಗೆ ಬಂದಾಗ ೨೫ ರೂಪಾಯಿ ನನ್ನ ಪಾಲಿನ ಸಂಭಾವನೆ ಎಂದು ತೆರಬೇ
ಕೆಂಬ ಉದಾರ ಸಂಕಲ್ಪನೆ ಮಾಡಿದೆ. ಅನಂತರ, ನಮ್ಮ ಎದುರುಮನೆ
ಎಂಕಪ್ಪನವರಿದ್ದರು. ಅವರನ್ನೂ ಇಂತಹ ಸಭೆಗೆ ಕರೆದುದರ ಔಚಿತ್ಯಕ್ಕೆ
ಬೆರಗಾದೆ; ಅವರಂತಹವರನ್ನು ಸೇರಿಸಿಕೊಂಡು ಮಾಡುವ ಯಾವ ಸಾರ್ವ-
ಜನಿಕ ಕೆಲಸ ಕಾರ್ಯಗಳೂ ನೆಟ್ಟಗಾಗುವುದಿಲ್ಲವೆಂದು ನನಗೆ ಸಂಪೂರ್ಣ
ತಿಳಿದಿತ್ತಾದ್ದರಿಂದ, ಹರಿದು ಹೋಗುವ ಹೊಳೆಗೆ ನೀರು ಚೆಲ್ಲಿದ ಹಾಗೆ
ನಾನು ಯಾಕೆ ೨೫ ರೂಪಾಯಿ ಹಾಳು ಮಾಡಬೇಕೆಂದು ಚಿಂತಿಸಿದೆ. ೧೦
ರೂಪಾಯಿಗಿಳಿಸಿದೆ. ಎಂಕಪ್ಪನವರು ತಮ್ಮ ಮನೆ ಅಟ್ಟವನ್ನೇ ವಾಚನಾ
ಲಯಕ್ಕಾಗಿ ಬಿಟ್ಟುಕೊಡುತ್ತೇನೆ ಅಂದಾಗ ೫ ಸಾಕು ಎಂದು ತೀರ್ಮಾ
ನಿಸಿದೆ. ಆ ದಾನದ ಒಳಗುಟ್ಟನ್ನರಿಯದೆ ಅಲ್ಲಿದ್ದವರು ಹಲ್ಲು ಕಿರಿದು
ಚಪ್ಪಾಳೆ ತಟ್ಟಿದ ಸದ್ದು ಕಿವಿಗೆ ಬೀಳುತ್ತಲೂ ಇವರ ಹಾಳು ಸಂಸ್ಥೆಗೆ
ನಾನು ಕೊಡುವುದು ಎರಡೇ ರೂಪಾಯಿ ಎಂದು ಔಡು ಕಚ್ಚಿದೆ. ಲಾಯರ್
ಶ್ರೀನಿವಾಸರಾಯರಿದ್ದರು. ಏನು ಬಂತಪ್ಪ ಗ್ರಹಚಾರ ಎಂದು ಹೆದರಿದೆ.
ಪೇಟೆ ಬೀದಿಯಲ್ಲಿರುವ ಒಂದು ಮಳಿಗೆಯಲ್ಲೇ ವಾಚನಾಲಯ ತೆರೆಯ
ಬೇಕೆಂದು ವಾದಿಸಿದರು. ನಾನು ಕಿವಿ ತೂಗಿದೆ. “ಪಚನಂ ಪಾಚನಂ ಯಸ್ಯ
ವಚನಂ ವಾಚನಂ ತಥಾ” ಎಂದು ಉದ್ಘೋಷಿಸಿದರು. ಪ್ರಾಚೀನ ಕನ್ನಡ
ಸಾಮ್ರಾಜ್ಯಗಳ ಚರಿತ್ರೆಯನ್ನು ವಿಶದೀಕರಿಸಿ, ಆಗಿನಕಾಲದ ಜನನಾಯಕರು
ವಾಚನಾಲಯಗಳಿಗೆ ಕಾರಣಪುರುಷರಾದ ಬಗೆಯನ್ನು ಕಣ್ಣಿಗೆ ಕಟ್ಟಿದರು.
ನಾನು ನಾಚಿಕೆಯಿಂದ ತಲೆತಗ್ಗಿಸಿದೆ. ಐದು ರೂಪಾಯಿಗಳನ್ನಾದರೂ
ತೆತ್ತು ನನ್ನ ವಿದ್ಯಾಪಕ್ಷಪಾತವನ್ನು ನೆಲೆಗೊಳಿಸಬೇಕೆನಿಸಿತು. ಶ್ರೀನಿವಾಸ
ರಾಯರು ಅಲ್ಲಿಗೆ ನಿಲ್ಲಿಸಲಿಲ್ಲ. ವಾಚನಾಲಯಕ್ಕೆ ನಾವು ತರಿಸಬಹುದಾದ
ವಿಧವಿಧವಾದ ಪತ್ರಿಕೆಗಳನ್ನೂ ಮಾಸಿಕೆಗಳನ್ನೂ ದ್ವೈ-ತ್ರೈ-ಷೈ-ಮಾಸಿಕೆ
ಗಳನ್ನೂ ಸುಂದರ ಶೈಲಿಯಲ್ಲಿ ಚಿತ್ರಿಸಿದರು. ನನ್ನ ಕಿವಿಗೆ ತೊಣಚಿ
ಹೊಕ್ಕಿತು. ಐದು ಯಾವ ಮೂಲೆಗೆ? ಐವ....? ಛೆ! ದಾತೃ ಮರುಳೋ
ಶ್ರೋತೃ ಮರುಳೋ, ಅಂತ ಗಾದೆಯೇ ಇದೆ. ಇಪ್ಪತ್ತೈದು ತೆತ್ತು

ಬಿಡೋಣ, ಎಂದು ಮನಸ್ಸು ಮಾಡಿದೆ. ಎಂಕಪ್ಪನಿಗೂ ವಾಚನಾಲಯಕ್ಕೂ ಸಂಬಂಧ ತಪ್ಪಿತು ಅಂದಾಗ, ಇನ್ನೂ ಐದು ರೂಪಾಯಿ ಸೇರಿಸಿ, ಮೂವತ್ತು ಕೊಡೋಣ, ಎಂದು ನಿರ್ಧರಿಸಿದೆ. ಕೃಷ್ಣಪ್ಪ ಎದ್ದ; ಶುದ್ಧ ಆಷಾಢಭೂತಿ ಬಾಯಿಬಡಕ. ಯಾವುದರ ಪರವಾಗಿಯಾದರೂ ಬಾಯಿ ಬಡಿಯುವುದಕ್ಕೆ ಸಿದ್ಧ. ನಾಳೆ ಇದೇ ವಾಚನಾಲಯದೊಳಕ್ಕೆ ನುಗ್ಗಿ ರಂಪ ಎಬ್ಬಿಸುವವನೂ ಅವನೇ. ಥೂ! ಅವನಿಂದ ನಮ್ಮೂರಿಗೆ ಉಳಿಗಾಲವಿಲ್ಲವಲ್ಲಾ, ಎಂದು ನನಗೆ ನಾನೇ ಗೊಣಗಿಕೊಂಡೆ. ಅವನ ಮಾತಿನ ಧೋರಣೆ ಕೇಳಿ ನನಗೆ ಮೈಯೆಲ್ಲ ಉರಿಯತೊಡಗಿತು. ಅಜ್ಞಾನಾಂಧಃಕಾರ, ವಾತಾವರಣ, ಜ್ಞಾನ. ಪ್ರಸಾರ, ಪತ್ರಿಕೋದ್ಯಮ, ಕೃತ್ತಿಕೋತ್ಸವ....ಮಣ್ಣು, ಸುಡುಗಾಡು! ಹದಿನೈದು ರೂಪಾಯಿಗಿಂತ ಹೆಚ್ಚು ಒಂದು ಬಿಡಿ ಕಾಸೂ ಕೊಡಬಾರದು, ಅನ್ನಿಸಿತು ನನಗೆ. ಮಹರಾಯ ಮಾತಾದರೂ ನಿಲ್ಲಿಸಿದನೆ ಬೇಗ? ಊಹುಂ. ಜನತಾಜನಾರ್ದನ, ಪುಂಖಾನುಪುಂಖ, ಜ್ಞಾನಜ್ಯೋತಿ....ನನಗೆ ರೇಗಿತು. ಮುಂದಕ್ಕೆ ಜ್ಞಾನಪ್ರಸಾರ ಜ್ಞಾನಜ್ಯೋತಿ ಎಂಬ ದುರಹಂಕಾರದ ಮಾತುಗಳು ಕೃಷ್ಣಪ್ಪನ ಬಾಯಿಂದ ಬಂದರೆ, ಒಂದೊಂದು ಸಾರಿಗೂ ಒಂದೊಂದು ರೂಪಾಯಿ ಕಡಮೆ ಮಾಡುವುದು—ಹದಿನೈದರಲ್ಲಿ, ಎಂದು ನಿಶ್ಚಯಿಸಿದೆ. ಒಂದೇ ಒಂದು ರೂಪಾಯಿ ಉಳಿಸಿ, ಆತ ಕೂತ! ನರಸಿಂಗರಾಯರ ಭಾಷಣವಾಗುತ್ತಿದ್ದಾಗ, ಎಲ್ಲರಿಗೂ ಒಂದೊಂದು ಕಪ್ ಚಹ ಹಂಚಿದರು. ಚಹ ಮಾಡುವುದಕ್ಕೆ ಆತಗೆ ಬರದು ಅಂತ ಅಂದು ಆ ಹೋಟೆಲಿನವನು ಸ್ಪಷ್ಟಮಾಡಿಬಿಟ್ಟ. ಅಷ್ಟು ಆನಂದದಾಯಕವಾಗಿತ್ತು ಅವನ ಚಹ. ಹಾಲು ಸಕ್ಕರೆ ಕಷಾಯ ಎಲ್ಲವೂ ಮಿತ-ಹಿತ. ಅದನ್ನು ಹೀರುತ್ತಾ ಚಂದಾಹಣದಕಡೆ ನನ್ನ ಗಮನಹೋಯಿತು. ಛೆ! ಹಾಳು ಕೃಷ್ಣಪ್ಪನ ಮೇಲಿನ ಸೇಡಿನಿಂದ ನಾನು ಸಾರ್ವಜನಿಕ ಸಂಸ್ಥೆಯ ಬಾಯಿಗೆ ಮಣ್ಣು ತೂರುವುದೆ? ಆಗದು.... ಇಪ್ಪತ್ತು ರೂಪಾಯಿ ಕೊಟ್ಟು ಕೈಮುಗಿದೇ ಬಿಡುವ, ಎಂದು ಸಂಕಲ್ಪಿಸಿದೆ. ಕೊನೆಯ ಭಾಷಣ, ಕೋನೇರಿರಾಯರದು. ಅವರು ಕೆಲವು ಹೊಸ ವಿಷಯಗಳನ್ನು ಹೊರಗೆಡಹಿದರು. ವಾಚನಾಲಯದ ಸ್ಥಾಪನೆಯ ವಿಷಯವಾಗಿ ಅವರೂ ಇನ್ನು ಮೂರು ಮಂದಿ ಗೃಹಸ್ಥರೂ ಹಿಂದಿನ ದಿನ ಅಮೀಲ್ದಾರರನ್ನು ಕಂಡು ಮಾತನಾಡಿದ್ದರಂತೆ. ಅದನ್ನು

ಕೇಳಿದಾಗ ನನ್ನ ಸ್ವಾಭಿಮಾನವೆಲ್ಲ ಕೆದಳಿ ಕಾಳಿಂಗವಾಯಿತು. ಅಮೀಲ್ದಾರರಿಂದ ನನಗೂ ಒಂದೆರಡು ಕೆಲಸಗಳಾಗಬೇಕಿತ್ತು. ನನ್ನನ್ನ ಕರೆದಿದ್ದರೆ ನಾನೂ ಸೇರುತ್ತಿರಲಿಲ್ಲವೆ? ಗುಟ್ಟಿನಲ್ಲಿ ಇವರೇ ಹೋಗಿ ಏಕೆ ಗೋವಿಂದಾ ಅನ್ನಬೇಕು? ಇವರ ವಾಚನಾಲಯವೂ ಸಾಕು, ಇವರ ಸಹವಾಸವೂ ಸಾಕು, ಐದು ರೂಪಾಯಿ ಚಂದಾ ಅಂತ ಬರೆದುಬಿಟ್ಟು ಎದ್ದೇಬಿಡೋಣ ಅಂದುಕೊಂಡೆ. ಆಗ, ವಂದನಾರ್ಪಣ ಪ್ರಾರಂಭವಾಯಿತು. ರಾಮರಾಯರೇ ವಂದನಾರ್ಪಣೆಮಾಡಿದ್ರು. ಆದರೂ, ಅವರು ನನ್ನ ಹೆಸರನ್ನು ಮರೆತದ್ದು ಆಶ್ಚರ್ಯ. ನನ್ನ ಮನೆ ಜಮಖಾನೆ ಮೇಲೆ ನಿಂತು, ಅದನ್ನೇ ತುಳಿದು, ನನ್ನನ್ನೇ ಮರೆಯುವುದೆಂದರೆ.... ಪಾಪಿಗಳಿಗೆ ಮೂರೇ ರೂಪಾಯಿ ಕೊಡೋದು!.... ಅಷ್ಟರೊಳಗೆ, ಚಂದಾ ಹಣದ ಪುಸ್ತಕ ನನ್ನೆದುರಿಗೆ ಬಂತು. ೩—೮—೦ ಅಂತ ಬರೆದೆ....ಮರುದಿನ ರಾಮರಾಯರ ಗುಮಾಸ್ತೆ ಮನೆ ಹತ್ತಿರ ಬಂದ. ತಮ್ಮ ಚಂದಾಹಣ ಎಷ್ಟು ಅಂತ ಗೊತ್ತಾಗುವುದಿಲ್ಲ. ರೂಪಾಯಿ ಅಂಕಿ ಇದ್ದಕಡೆ ತಮ್ಮ ಪೇನಾದಿಂದ ಇಂಕುತೊಟ್ಟಿಕ್ಕಿದೆ, "ಅಂದ". ಅನುಕೂಲವಾಯಿತು, ಬಿಡು!" ಎಂದು ಆಕೆಗೆ ಹೇಳಿ, ಆಕೆ ಕೊಟ್ಟ ಎಂಟಾಣೆಯನ್ನು ಗುಮಾಸ್ತೆ ಕೈಯಲ್ಲಿರಿಸಿ, ನಡುವಣ ಸೊನ್ನೆಯನ್ನು ಎಂಟುಮಾಡಿದೆ....

---

ಮಾರುವವರ ಡೊಂಕು ೧೭

# ಬೆರಣಿ ಬೀರಮ್ಮ

ಬೆರಣಿ ಬೀರಮ್ಮನಿಗೆ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದ ಮೈಸೂರಿನ ಸ್ಥಿತಿಗತಿಗಳು ಕೂಡ ಚೆನ್ನಾಗಿ ಗೊತ್ತು. ಅಂದಿನಿಂದ ಇಂದಿನವರೆಗೂ ಆಗಿರುವ ರೈಲು, ತಂತಿ, ಬಸ್ಸು, ಇನಾಕ್ಯುಲೇಷನ್, ವಿಮಾನ ಮುಂತಾದುವನ್ನೆಲ್ಲ ಅವಳು ಸದಾ ಹೇಳುತ್ತಿರುತ್ತಾಳೆ. ಆಗಿನ ಕಾಲದಿಂದ ಅವಳು ಬೆರಣಿಯನ್ನೇ ಮಾರಿ ಜೀವನ ನಡೆಸುತ್ತಿದ್ದಾಳೆ. ಈಚೀಚೆಗೆ

ಅವಳಿಗೆ ಲೆಕ್ಕ ಮಾತ್ರ ಕೊಂಚ ತಪ್ಪುತ್ತೆ. ಅದೂ ಕೂಡ, ಮರವೆ ಯಿಂದಲ್ಲ, ಮಾತಿನ ರಗಳೆಯಿಂದ.

"ಬೀರಮ್ಮಾ, ಎಷ್ಟಿದೆ ಬೆರಣಿ?" ಅಂದರೆ ಸರಿ, "ಸುಮಾರು ನೂರು ಜೊತೆ ಇದೇರವ್ವಾ" ಅನ್ನುತ್ತಾಳೆ. "ಚೆನ್ನಾಗಿ ಒಣಗಿದೆಯೋ?" ಅಂತ ನೀವು ಅನುಮಾನಿಸಿದರೆ, "ತುಪ್ಪ ಹುಯ್ದ ಹಾಗೆ ಉರೀತದೆ" ಅನ್ನು ತ್ತಾಳೆ. "ಹಾಗಾದರೆ ಒಂದು ಅರವತ್ತು ಜೊತೆ ಕೊಡು" ಅಂತ ನೀವು ಕುಕ್ಕೆ ಹಿಡಿದರೆ, ಬೀರಮ್ಮ ಹೊರೆ ಇಳಿಸಿ ಎಣಿಸುವುದಕ್ಕೆ ಪ್ರಾರಂಭ ಮಾಡು ತ್ತಾಳೆ; ಕೈಗೆ ಬೆರಣಿ ಬಂದ ಕೂಡಲೇ ಬಾಯಿಗೆ ಬಡಾಯಿಯೂ ಹತ್ತು ತ್ತದೆ.

"ಒಂದು, ಎರಡು, ಮೂರು, ನಾಲ್ಕು, ಐದು, ಆರು.... ನಿಮ್ಮ ಸೊಸೇಗೆ ಎಷ್ಟು ಮಕ್ಕಳವ್ವಾ?...." "ಎಂಟು ಮಕ್ಕಳು" "ಒಳ್ಳೇದವ್ವಾ ಚೆನ್ನಾಗಿ ಬಾಳಿ ಬದುಕಲಿ ಎಂಟೂನೆ....ಒಂಬತ್ತು, ಹತ್ತು, ಹನ್ನೊಂದು, ಹನ್ನೆರಡು, ಹದಿಮೂರು, ಹದಿನಾರು....ಇವತ್ತೆಷ್ಟವ್ವಾ ತಾರೀಕು...?" "ಇಪ್ಪತ್ತಾರು, ಸಂಬಳ ಬರೋಕೆ ಇನ್ನೂ ಐದು ದಿನ ಇದೆ" ಇಷ್ಟು ಬೇಗ ಇಪ್ಪತ್ತಾರಾಗೋಯ್ತು?........ಇಪ್ಪತ್ತೇಳು, ಇಪ್ಪತ್ತೆಂಟು ಇಪ್ಪ ತ್ತೊಂಬತ್ತು, ಮುವ್ವತ್ತು....ಅವ್ವಾ ನಿಮ್ಮ ಹಿರೇಮಗನಿಗೆ ಸಂಬಳ ಎಷ್ಟ್ರವ್ವಾ? ಸಾಹೇಬ್ರಂಗೆ ಪರಂಗಿ ಟೋಪಿ ಹಾಕ್ತಾರಲ್ಲಾ....? "........ಎಷ್ಟವ್ವಾ ಸಂಬಳ?" ಅಯ್ಯೋ ಬಿಡು, ಬೀರಮ್ಮ,........ಸಾವಿರಾರು ರೂಪಾಯಿ ಖರ್ಚು ಮಾಡಿ ಓದಿ, ಕರೀ ಅಂಗಿ ಹಾಕ್ಕೊಂಡು ಕೈ ಮುಗಿದ್ರೂವೆ ತಿಂಗಳಿಗೆ ಮೂವತ್ತೈದು ಕಾಗದದ ಚೂರು ತರುತ್ತಾನೆ. ........ "ಹಾಗನ್ಬೇಡವ್ವಾ, ಮೂವತ್ತೈದು, ಕಡಿಮೆಯೇನಲ್ಲ. .... .... ಮೂವತ್ತಾರು, ಮೂವತ್ತೇಳು, ಮೂವತ್ತೆಂಟು, ಮೂವತ್ತೊಂಬತ್ತು.... ಅವ್ವಾ ನೀವುಟ್ಟಿರೋ ಸೀರೆಗೆ ಎಷ್ಟ್ರವ್ವಾ ಬೆಲೆ?" "ಅಯ್ಯೋ .... ಈಗಿನ ಬೆಲೆ ಏನು ಕೇಳ್ತೀಯ, ಬೀರಮ್ಮಾ .... ಜರೀದಲ್ಲಾ ಗಿರೀದಲ್ಲಾ, ಆದ್ರೂನೋಡು, ನಲವತ್ತಾರು ರೂಪಾಯಿ ಕೊಟ್ಟು ತಂದಿದಾರೆ ನಮ್ಮ ವರು" "ನಲವತ್ತಾರು ರೂಪಾಯಿ? .... .... ! ! .... ನಿಮ್ಮಂತಹ ಪುಣ್ಯ ವಂತರು ಕೊಡಬಹುದು, ಉಡಬಹುದು .... ನಲವತ್ತಾರು, ನಲವತ್ತೇಳು,

ನಲವತ್ತೆಂಟು .... ಲೆಕ್ಕ ನೋಡ್ಕೋಳ್ರವ್ವಾ, ನನ್ನ ಹಾಳು ಮರವೇರಿ, ಬೆರಣಿ ಕಡಿಮೆ ಬಂದೀತು .... ನಲವತ್ತೊಂಬತ್ತು, ಐವತ್ತು .... ನಿಮಗೆ ಎಷ್ಟ್ರವ್ವಾ ವಯಸ್ಸು ? " " ಅಯ್ಯೋ ಅದನ್ನ ಕಟ್ಕೊಂಡೇನು ಬೀರಮ್ಮಾ ? ಹಾಕು ಬೆರಣಿ ......... " " ಅದಕ್ಕಲ್ರವ್ವಾ, ನಿಮ್ಮ ಹಾಗೇ ನನಗೊಬ್ಬಳು ಮಗಳಿದ್ದಳು, ಹುಟ್ಟಿದ ಮೂರು ತಿಂಗ್ಳಲ್ಲೇ ಸತ್ಹೋದ್ಳು, ಅವಳಿದ್ದಿದ್ದರೆ ಈಗ ಅವಳಿಗೆ ಎಷ್ಟು ವಯಸ್ಸಾಗಿರ್ತಿತ್ತೊಂತ ತಿಳ್ಕೋಳೋಕೆ ತಾಯಿ, ನಾ ಕೇಳಿದ್ದು........" " ನನಗೀಗ, ಐವತ್ತಾರು, ಐವತ್ತೇಳು, ಇರಬಹುದು. ಹಂಗಾ ? .... ಐವತ್ತಾರು, ಐವತ್ತೇಳು, ಐವತ್ತೆಂಟು, ಐವತ್ತೊಂಬತ್ತು, ಅರವತ್ತು .... ನೋಡ್ಕೋಳಿ ಅವ್ವಾ, ಕೊಸರಿಗೇಂತ ಇನ್ನೊಂದು ಜೊತೆ ಹಾಕಿದೀನಿ. "

ಹೀಗೆ ಬೆರಣಿ ಕೊಟ್ಟು ಬೀರವ್ಮ ಹೊರಟುಹೋದ ಮರುದಿನ, ಅತ್ತೆಗೂ ಸೊಸೆಗೂ ಜಗಳ. " ನಿನ್ನೆ ತಾನೇ ಅರವತ್ತು ಜೊತೆ ಸೊಗಸಾದ ಬೆರಣೀನ ಬೀರವ್ಮ ಎಣಿಸ್ಕೊಟ್ಬಿಟ್ಟು ಹೋದಳು ! ನಾನೇ ನಿಂತು ಹಾಕಿ ಸಿದೀನಿ, ನನ್ನೆದುರಿಗೇ ಎಣಿಸಿದಾಳೆ ! ಅದನ್ನೆಲ್ಲಾ ಸಿಕ್ಕಾಬಟ್ಟೆ ಉರಿಸಿಬಿಟ್ಟು ಬೆರಣಿ ಬೇಕೂಂತ ಬೊಂಬ್ಡಿ ಬಾರಿಸ್ತಾಳಲ್ಲಾ, ಈ ಬಣ್ಣದ ಬೀಸಣಿಗೆ...." ಅಂತ ಐವತ್ತಾರು ಐವತ್ತೇಳು ವಯಸ್ಸಿನ ಅತ್ತೆ ಆರ್ಭಟಿಸುವಳು !

---

ಅನುಮಾನದ ಡೊಂಕು ೧೮

# ಹೀಗೂ ಒಬ್ಬರು !



'ಸಾಮಾನ್ಯವಾಗಿ ರೈಲು ಹೊರಡುವುದಕ್ಕೆ ಅರ್ಧ ಮುಕ್ಕಾಲುಗಂಟೆ ಮುಂಚಿತವಾಗಿಯೇ ಸ್ಟೇಷನ್ನಿನಲ್ಲಿದ್ದು ಬಿಡುವುದು ನನ್ನ ಪದ್ಧತಿ. ನಾವೇನೂ ಇಂಜಿನ್ನಿಗೆ ಇದ್ದಲು ತುಂಬಬೇಕಾಗಿಲ್ಲ. ಆದರೂ, ಹಾಗೆ ಬಂದುಬಿಟ್ಟಿದೆ, ನನ್ನ ಪದ್ಧತಿ. (ನನ್ನ ಮದುವೆಗೂ ಅಷ್ಟೆ. ನಾಲ್ಕು ದಿನ ಮುಂಚಿತವಾಗಿಯೇ ನಾವು ಬೀಗರ ಊರಿಗೆ ಹೋಗಿದ್ದೆವು.) ಅಲ್ಲಿ ಗೋಡೆಯ ಮೇಲೆ ಅಂಟಿಸಿದ್ದ

ನೋಟೀಸುಗಳನ್ನೆಲ್ಲಾ ಒಂದೊಂದಾಗಿ ಓದುತ್ತಾ ಮುಂದೆ ಮುಂದೆ ಸಾಗಿದೆ. ಬರುವವರು, ಹೋಗುವವರು ಯಾರುಯಾರೆಂದು ನೋಡುತ್ತಾ ಪರಿಚಿತ ರನ್ನು ಉಪಚಾರೋಕ್ತಿಗಳಿಂದ ತಣಿಸುತ್ತ ಗಡಿಯಾರದ ಮುಳ್ಳನ್ನು ಮುಂದು ಮುಂದಕ್ಕೆ ನೂಕುತ್ತಿದ್ದೆ.

ಆಗ, ಒಬ್ಬರು ಮುದುಕರು ಗಂಟುಬಿದ್ದರು. ಬೋಳುಬುರುಡೆ, ಕುಳ್ಳು, ಗೊಬ್ಬರಹಾಕಿ ಗುಂಡಗೆ ಬೆಳಸಿದ ಉರುಳುಗೆಡ್ಡೆ! ಉಟ್ಟದ್ದ ಪಂಚೆಗೆ ಅಗಲ ಹೆಚ್ಚು, ಉದ್ದ ಕಡಿಮೆ, ಬಿಗಿ ಸಾಲದು. ಗುಂಡಿಗಳ ಸುಳಿವೇ ಇಲ್ಲದ ಒಂದು ಕೊಳೆ ಷರ್ಟು. ಅವರ ಮೈಕಟ್ಟು ಈಗಿನದರ ಇಮ್ಮಡಿಯಾಗಿದ್ದಾಗ ಹೊಲಿಸಿದ್ದು ಅಂತ ಕಾಣುತ್ತೆ .... ಕೈಯಲ್ಲಿ ಒನಕೆ ಹಾಗಿನ ಒಂದು ಊರುಗೋಲು.

"ಅರಸೀಕೆರೆ ಗಾಡಿ ಹೊರಡುವುದು ಯಾವಾಗ ಸಾರ್?" ಅಂದರು ಮುದುಕರು.

"ಒಂಬತ್ತೂವರೆಗೆ"

"ಸರಿಯಾಗಿ ಒಂಬತ್ತೂವರೆಗೋ?"

"ಹೌದು, ಹೌದು! ಅದರಲ್ಲಿ ಅನುಮಾನವೇನು?"

"ಅಂದರೆ, ಈ ಗಡಿಯಾರದಲ್ಲಿ ಒಂಬತ್ತೂವರೆ ಆದರೆ, ರೈಲನ್ನ ಬಿಟ್ಟುಬಿಡ್ತಾನೋ?"

"ಹುಂ, ಬಿಡುತ್ತಾನೆ."

"ನಿಮಗೆ ಚೆನ್ನಾಗಿ ಗೊತ್ತು ತಾನೆ?"

"ಗೊತ್ತು ಸ್ವಾಮಿ, ಅನೇಕ ಸಾರಿ ಹೋಗಿದ್ದೇನೆ, ನೀವೇನೂ ಅನುಮಾನಪಡಬೇಡಿ."

"ಅನುಮಾನವೇನೂ ಇಲ್ಲ, ನಿಮ್ಮ ಮಾತಿನಲ್ಲಿ ನನಗೇನು, ಅನುಮಾನ? ನನ್ನನ್ನು ಮೋಸಮಾಡಿ ನಿಮಗಾಗಬೇಕಾದ್ದು ತಾನೇ ಏನಿದೆ? ಆದರೂ...."

"ಒಂಬತ್ತೂವರೆಗೆ ಹೊರಡುತ್ತೆ."

"ಈಗೆಷ್ಟು, ಘಂಟೆ?"

"ನೀವೇ ನೋಡಿ, ದೊಡ್ಡ ಮುಳ್ಳು ಎರಡರಮೇಲಿದೆ.... ಅಂದರೆ, ಒಂಬತ್ತೂ ಹತ್ತು."

" ಅಂದರೆ, ಇನ್ನೆಷ್ಟು ನಿಮಿಷ ಇದೆ? "

" ಇಪ್ಪತ್ತು ನಿಮಿಷ."

" ಸರಿಯಾಗಿ ಇಪ್ಪತ್ತು ನಿಮಿಷ ಇದೆಯೋ? "

" ಹೌದು, ಹೌದು, ಇಪ್ಪತ್ತೇ ನಿಮಿಷ."

" ಅರಸೀಕೆರೆ ಗಾಡಿ ಒಂಬತ್ತೂವರೆಗೆ ಹೊರಡುತ್ತದೆ ಎಂದು ಇಲ್ಲೆಲ್ಲಾದರೂ ಹಾಕಿದಾನೋ? "

" ಹಾಕಿದಾನೆ, ಸ್ವಾಮಿ!.... ಹೆದರಿಕೆ ಏನು, ಆ ಬೋರ್ಡಲ್ಲೂ ಹಾಕಿದಾನೆ, ಗೈಡ್‌ನಲ್ಲೂ ಇದೆ....ಎಷ್ಟೋ ವರ್ಷಗಳಿಂದ ಒಂಬತ್ತೂವರೆಗೇ."

" ರಾತ್ರಿ ಗಾಡಿ? "

" ಅದು, ಎಂಟೂವರೆಗೆ."

" ಬೆಳಗ್ಗಿನದು?

" ಅದೇ! ಈಗಿನದು! ಒಂಬತ್ತೂವರೆಗೆ! "

" ಯಾಕೆ ಸಾರ್, ಹಾಗೆ ಮಾಡಿದಾರೆ? "

" ಯಾಕೋ ಗೊತ್ತಿಲ್ಲ. ಅಂತೂ ಹಾಗೇ ನಡೀತಾ ಇರೋದು."

" ಹಾಗಾದರೆ, ಅರಸೀಕೆರೆ ಗಾಡಿ ಒಂಬತ್ತೂವರೆಗೆ ಹೊರಡುತ್ತದೆ ಎಂದು ನಿಮಗೆ ಸರಿಯಾಗಿ ಗೊತ್ತಿಲ್ಲವೋ? "

" ಅಯ್ಯೋ! ಅಯ್ಯೋ!.... ಯಾಕೆ ಹಾಗೆ ಅಂತ ಗೊತ್ತಿಲ್ಲ, ಅಷ್ಟೆ. ಹೊರಡುವುದೇನೋ ಒಂಬತ್ತೂವರೆಗೇ...."

" ಸರಿ,....ಅದು,.... ಆ ಗಾಡಿ ಅರಸೀಕೆರೆಗೆ ಹೋಗುತ್ತೋ? "

" ಇಲ್ಲ."

" ಅದು? "

" ಅದು, ಗುಡ್ಸ್ ಗಾಡಿಯಲ್ಲವೇ? "

" ಅದಲ್ಲ,....ಆಕಡೆಯದು? "

" ಯಾವುದು? .... ಅದೇ? "

" ಅದಲ್ಲ....ಈಕಡೆ ಕೊನೆಯದು? "

" ಅದೂ ಅಲ್ಲ. "

" ಮತ್ತೆ ಒಂಬತ್ತುವರೆಗೆ ಹೋಗುವುದು ಯಾವುದು? "

" ಇದೇ !.... ಇಲ್ಲಿ ನಿಂತಿದೆಯಲ್ಲಾ, ಇದು ! "

" ಓಹೋ ಇಲ್ಲೇ ಇದೆಯೇನು ಇದು ?.... ಇದು ನೆಟ್ಟನೆ ಅಲ್ಲಿಗೇ ಹೋಗುತ್ತೋ ?.... ಅಥವಾ...."

" ನೆಟ್ಟಗೆ ಅಲ್ಲಿಗೇನೆ. "

" ಅಲ್ಲಿಗೆ ಅಂದರೆ ? "

" ಅರಸೀಕೆರೆಗೆ. "

" ಅಥವಾ.... ಎಲ್ಲಾದರೂ ಇಳಿದು...."

" ಬೇಡಿ, ಬೇಡಿ."

" ಅರಸೀಕೆರೆಯಲ್ಲಿ ಇಳಿಯಬೇಡವೇ? ಅರಸೀಕೆರೆಗೆ ಹೋಗುವವರು?"

" ಅವರು ಅಲ್ಲಿ ಇಳಿಯಲೇಬೇಕು. ಇಳಿಯದೆ ಹೇಗೆ ? "

" ನಡುನಡುವೆ, ಅಲ್ಲಿ, ಇಲ್ಲಿ, ಇಳಿದು, ಹತ್ತಿ...."

" ಇಲ್ಲ, ಯಾವ ತಂಟೇನೂ ಇಲ್ಲ."

" ಸರಿ........ವಿಚಾರಿಸಿದೆ, ಅಷ್ಟೆ. ಕೆಲವರಿದಾರೆ, ಸಾರ್ ! ಮತ್ತೊಬ್ಬರನ್ನ ವಿಚಾರಿಸಿದರೆ, ಅವಮಾನ ಅಂತ ನಾಚಿಕೆಪಟ್ಟುಕೊಂಡು, ನೆಟ್ಟಗೆ ಹೋಗಿ ಯಾವ ರೈಲಲ್ಲೋ ಕುಳಿತು, ಎತ್ಲೋ ಹೋಗಿ ಇಳಿದು ಪೇಚಾಡುತ್ತಾರೆ. ನಾನು ಹಾಗಲ್ಲ ! ಸಾರ್ ! ಈಗ ನೋಡಿ, ನಿಮ್ಮನ್ನ ಮಾತನಾಡಿಸಿದೆ. ಅದರಿಂದ ನನ್ನ ಗೌರವ ಏನಾದರೂ ಕಡಿಮೆಯಾಯಿತೇ ? ನೀವೇ ಹೇಳಿ...."

" ಛೇ.... ಛೆ.... ಹಾಗನ್ನಬಾರದು, ನೀವು. ನನ್ನ ಗೌರವ ಎಂಥಾದ್ದು ! ನಿಮ್ಮದೆಂಥಾದ್ದು !.... ಒಂದಕ್ಕೊಂದು ಸಂಬಂಧವೇ ಇಲ್ಲ...."

" ನೀವೆಲ್ಲಿಗೆ ? "

"ನಾನು, ಶಿವಮೊಗ್ಗಕ್ಕೆ ಹೋಗುತ್ತೇನೆ. ನಿಮ್ಮ ಗಾಡಿಯಲ್ಲೇ ನಾನೂ ಬರುತ್ತೇನೆ."

" ಓ ! ಅನುಕೂಲವಾಯಿತು, ಸಾರ್ ! ಒಬ್ಬರಿಗೊಬ್ಬರು ಜೊತೆ ಆಯಿತಲ್ಲಾ....ಬನ್ನಿ....ಅದೇ ತಾನೇ, ಗಾಡಿ ? "

" ಹೌದು....ಅದೇ...."

ಇಬ್ಬರೂ ಗಾಡಿಯ ಹತ್ತಿರಕ್ಕೆ ಹೋದೆವು. ಅಲ್ಲಿ, ಆಗಲೇ ಕುಳಿತಿದ್ದ ಒಬ್ಬಿಬ್ಬರನ್ನು ಕಂಡು ಆತ .

" ಸ್ವಾಮೀ.... ಅರಸೀಕೆರೆ ಗಾಡಿ ಇದೇ ಅಲ್ಲವೆ ? " ಎಂದರು.

" ಹೌದು, ಬನ್ನಿ. "

" ಎಷ್ಟು ಗಂಟೆಗೆ ಹೊರಡುತ್ತೆ ? "

" ಇನ್ನೇನು ಹೊರಟುಬಿಡುತ್ತೆ....ಬನ್ನಿ."

" ಇದೇ ಗಾಡಿಯೋ ಅರಸೀಕೆರೆಗೆ ? "

" ಹೌದು ಸ್ವಾಮಿ !....ಇಷ್ಟು ಅನುಮಾನವೇ ? "

" ಅನುಮಾನವಿಲ್ಲ,....ಆ ರೈಲು ಎಲ್ಲಿಗೆ ಹೋಗುತ್ತೆ ಅಂತ ಯೋಚನೆ ಮಾಡಿದೆ, ಅಷ್ಟೆ."

" ಯಾವುದು ?.... ಅದೇ ?....ಅದು ಬೆಂಗಳೂರಿಗೆ. "

" ಬೆಂಗಳೂರಿಗೆ ಅರಸೀಕೆರೆ ಮೇಲೂ ಹೋಗಬಹುದಲ್ಲಾ, ಮತ್ತೆ ಎರಡು ರೈಲು ಯಾಕೆ ಬಿಡುತ್ತಾರೆ ? ಬೇರೆ ಬೇರೆ ? "

" ಅದನ್ನೆಲ್ಲಾ ಕಟ್ಟಿಕೊಂಡು ನಮಗೂ ನಿಮಗೂ ಆಗಬೇಕಾದ್ದೇನು? ಬನ್ನಿ, ಕೂತುಕೊಳ್ಳಿ."

" ಆದರೂ,....ಒಂದೂರಿಗೆ....ಎರಡು ಕಡೆಗಳಿಂದ....ಎರಡು ರೈಲು!!"

" ಹೇಳುವವರಿಲ್ಲ ಕೇಳುವವರಿಲ್ಲ ಅಂತ ಇಟ್ಟುಕೊಳ್ಳಿ....ಬನ್ನಿ...."

" ಅಂತೂ ಅರಸೀಕೆರೆ ಗಾಡಿ ಇದೇ ತಾನೆ ? "

" ಅಯ್ಯೋ ರಾಮ ! "

" ಮತ್ತೇನೂ ಇಲ್ಲ,....ಆಕಡೆ, ಒಂದು ಇಂಜಿನ್ನು ಗಾಡಿಗಳನ್ನೆಳೆದುಕೊಂಡು, ಅತ್ತಲಾಗಿತ್ತಲಿಗೆ ಓಡಾಡುತ್ತಿದೆಯಲ್ಲಾಂತ ಅನುಮಾನಿಸಿದೆ.... ಅಷ್ಟೆ."

" ಯಾವುದು ? ಅದೇ ! ಅದು ಬರೀ ಷಂಟಿಂಗು ಸ್ವಾಮೀ. ಅದೆಲ್ಲಿಗೂ ಹೋಗೂದಿಲ್ಲ."

" ಓಹೋ ! ಹೊಸ ಇಂಜಿನ್ನುಗಳನ್ನು ಪಳಗಿಸುತ್ತಿದಾರೋ ?.... ಸರಿ....ಸರಿ...."

ಆಗ, ಟಿಕೆಟ್ ಇನ್ಸ್ಪೆಕ್ಟರ್ ಒಬ್ಬರು ದಡದಡನೆ ಅಲ್ಲಿಗೆ ಬಂದರು. ಅವರೊಂದಿಗೂ ಅದೇ ಚರ್ಚೆ !

" ಸಾರ್ ! ಅರಸೀಕೆರೆ ರೈಲು ಯಾವುದು ? "

" ಇದೇ. ಹತ್ತು ಬೇಗ....ಹೊತ್ತಾಯ್ತು....ನಿನ್ನ ಟಿಕೆಟ್ಟೆಲ್ಲಿ ? "

" ಆಕಡೆ ನಿಂತಿದೆಯಲ್ಲಾ....ಅದೆಲ್ಲಿಗೆ ? "

" ನಿನ್ನ ಮಾವನ ಮನೆಗೆ... ಹತ್ತಯ್ಯಾ ಬೇಗ.... ಕೆಳಗೆಬಿದ್ದು ಚಕ್ರಕ್ಕೆ ಸಿಕ್ಕಿ ಸಾಯಬೇಡ....ಹತ್ತು ಬೇಗ...."

ಆತ ಅವರನ್ನು ಗಾಡಿಯೊಳಕ್ಕೆ ದಬ್ಬಿ ಬಾಗಿಲನ್ನು ಬಲವಾಗಿ ಎಳೆದುಕೊಂಡ. ಗಾಡಿಯೊಳಗೆ ಕುಳಿತಕೂಡಲೇ, ಅವರೆದುರಿಗೆ ಕೂತಿದ್ದವರೊಂದಿಗೆ ಮುದುಕರು :

" ನೋಡಿ, ಸಾರ್ ! ವಿಷಯ ತಿಳಿದುಕೊಳ್ಳೋಣ ಅಂತ ಆತನನ್ನ ಒಂದು ಮಾತು ಕೇಳಿದರೆ, ಹೀಗೆ ಉರಿದುಬೀಳುತ್ತಾನಲ್ಲಾ !.... ತಾವು ಅರಸೀಕೆರೆಗೋ ? " ಎಂದರು.

" ಇಲ್ಲ, ಹಾಸನದ ತನಕ "

" ಯಾಕೆ ? ಈ ರೈಲು ಅರಸೀಕೆರೆ ತನಕ ಹೋಗೋದಿಲ್ಲವೇನು ? "

" ಹೋಗುತ್ತೆ....ಆದರೂ, ನನ್ನ ಕೆಲಸ ಹಾಸನದಲ್ಲಿ."

" ಹಾಸನದಲ್ಲಿ....ತಾವು ಲಾಯರೇನು ? "

" ಹುಂ "

" ತಮ್ಮನ್ನ ನೋಡಿದಾಗಲೇ ತಿಳಿದುಕೊಂಡುಬಿಟ್ಟೆ .... ಈಚೆಗೆ ಲಾಯರುಗಳಿಗೆ ವರಮಾನ ತುಂಬಾ ಕಡಿಮೆ. ರೈತರೆಲ್ಲಾ ಬುದ್ಧಿವಂತರಾಗುತ್ತಾ ಇದಾರೆ....ಅನೇಕ ಲಾಯರುಗಳಿಗೆ ರೈಲು ಚಾರ್ಜಿಗೆ ಕೂಡ ಕೈಯಲ್ಲಿ ಕಾಸಿರುವುದಿಲ್ಲ."

" ನಾನು ಟಿಕೆಟ್ ತೆಗೆದುಕೊಂಡಿದೇನೆ."

" ಅಯ್ಯೋ, ಅಯ್ಯೋ !....ತಮಗೆ ಮಾವನಕಡೆ ಸಹಾಯ ಇರಬಹುದು. ಅಪ್ಪನ ಆಸ್ತಿ ಇರಬಹುದು, ಆದರೆ, ಇತರರ ಪಾಡು ? "

ಲಾಯರು ತಮ್ಮ ಕೈಯಲ್ಲಿದ್ದ ಹಿಂದೂ ಪತ್ರಿಕೆಯನ್ನು ತಮ್ಮ ಮುಖದೆದುರು ಬಿಚ್ಚಿ ಹಿಡಿದುಕೊಂಡರು.

" ಇಲ್ಲ ಸಾರ್ ! ತಾವು ಕೋಪಿಸಿಕೊಳ್ಳಬೇಡಿ ! ನಾನು ಹೇಳುತ್ತೇನೆ, ಕೇಳಿ : ಕೆಲವರಹಾಗೆ ದುಂದು ವೆಚ್ಚಮಾಡಬೇಡಿ.... ಇಸ್ಪೀಟು, ಕುದುರೆ-

ಜೂಜು, ಇವನ್ನೆಲ್ಲಾ ಬಿಟ್ಟುಬಿಡಿ .... ಬಂದದ್ದರಲ್ಲಿ ಅಲ್ಪ, ಸ್ವಲ್ಪ, ಮಿಗಿಸಿ, ಜಮೀನಿನ ಮೇಲೆ ಹಾಕಿ."

ಲಾಯರು ಪಕ್ಕದ ಸ್ಟೇಷನ್ನಿನಲ್ಲೇ ಇಳಿದು ಬೇರೆ ಗಾಡಿ ಹತ್ತಿದರು. ಆಗ, ಆತನ ಎಡಗಡೆ ಬೆಂಚಿನ ಆಚೆ ಮೂಲೆಯಲ್ಲಿ ಒಬ್ಬ ಹೆಂಗಸು ಕುಳಿತಿದ್ದರು. ೩೦—೩೫ ವರ್ಷ ವಯಸ್ಸಿರಬಹುದು, ಆದರೂ ಮದುವೆ ಯಾಗಿ ಮೊದಲನೆ ಸಲ ಗಂಡನೊಂದಿಗೆ ಅತ್ತೆಮನೆಗೆ ಹೋಗುವ ಸಡಗರ, ಒಯ್ಯಾರ, ಮೌನ, ಬಿಗುಮಾನ, ಗಾಬರಿ.

"ಏನು? ತಲೆನೋವೇನಮ್ಮಾ? ಏಕೆ, ಹಾಗೆ ಕೈಮೇಲೆ ತಲೆಯಿಟ್ಟು ಕೊಂಡು ಕುಳಿತಿದೀರಿ?" ಎಂದರು ಮುದುಕರು. ಆಕೆ ಮಾತನಾಡಲಿಲ್ಲ. ಪಕ್ಕದಲ್ಲೇ ಕುಳಿತಿದ್ದ ಗಂಡ ಆತನನ್ನ ದುರದುರನೆ ನೋಡಿದ.

"ಇಲ್ಲಿ ನೋಡಯ್ಯಾ ಇಲ್ಲಿ, ನೀಲಗಿರಿ ತೈಲವನ್ನೋ ಅಮೃತಾಂಜನ ವನ್ನೋ ಕೊಂಡುಕೊಂಡು ಆಕೆಗೆ ಕೊಡು! ಚಿಕ್ಕ ಹುಡುಗೀರಾದರೆ, ಹೇಗೋ ಚೇತರಿಸಿಕೊಳ್ಳುತ್ತಾರೆ....೪೦—೪೫ ವರ್ಷ ವಯಸ್ಸಾಗಿ ಬಿಟ್ಟರೆ, ಶೀಘ್ರವಲ್ಲೇ ಔಷಧಿ ಕೊಡಬೇಕು...."

ಅವರಿಬ್ಬರೂ ಆತನನ್ನು ಶಪಿಸುತ್ತಾ ಕಿಟಕಿ ಆಚೆ ತಲೆ ಇಟ್ಟು ಕುಳಿತು ಕೊಂಡರು. ಬಲಗಡೆ ಬೆಂಚಿನಮೇಲೆ ಮತ್ತೊಬ್ಬ ಮಹಿಳೆ ಇದ್ದರು. ಆತನ ಗಮನ ಆಕೆಯ ಕಡೆ ಹರಿಯಿತು.

"ಏನು, ತಾಯೀ, ಒಂಟಿಯಾಗಿ ಬಂದಿದ್ದೀರೋ ರೈಲಿಗೆ? ಹೀಗೆಲ್ಲಾ ಬರಬಾರದಮ್ಮ! ಎಷ್ಟಾದರೂ ಗಂಡಸರ ಸಂಗಡ ಓಡಾಡುವುದೇ ಹೆಂಗಸರಿಗೆ ಭೂಷಣ."

"ಸಾಕು! ಸುಮ್ಮನಿರಿ, ಅಯ್ಯನವರೇ...."

"ಜನರ ಬಾಯಿ ಮುಚ್ಚಿಸುವುದಕ್ಕಾಗುವುದಿಲ್ಲ ಅಂದೆ ಅಷ್ಟೆ.... ಹೆಣ್ಣು ಹೆಂಗಸು, ನೀನು........"

ಅಷ್ಟುಹೊತ್ತಿಗೆ ಒಂದು ಸ್ಟೇಷನ್ ಬಂತು. ಆಕೆ ಎದ್ದಳು........

"ಕೂತುಕೋ ಅಮ್ಮಾ! ಗಾಡಿ ನಿಲ್ಲಲಿ....ಅವಸರ ಏನು?.... ನಿಮ್ಮ ಮೈ...ಸ್ವಲ್ಪ....ದಪ್ಪ,...ನಿಮ್ಮಹಾಗಿರುವವರು ಹುಷಾರಾಗಿಳಿಯಬೇಕಮ್ಮ... ಚಿಕ್ಕ ಹುಡುಗಿಯ ಹಾಗೆ ನೆಗೆಯಬೇಡಮ್ಮಾ...."

" ಏನು ?....ಇವಯ್ಯಾ ಆಷ್ಟೊತ್ತಿಂದ ಹೊಸಮುಳೆ ಬಿದ್ದಾಗ ಕಪ್ಪೆ ಒಟ ಒಟ ಒಟ ಅಂಬೋಹಾಗೆ ಒಂದೇಸವನೆ ಅವರಿವರನ್ನ ಎತ್ತಿ ಆಡುತ್ತಲೇ ಇದಾನೆ. ಹುಚ್ಚುಗಿಚ್ಚು ಬಡಿದಿದೆಯೋ ಏನೋ ಈ ಮುದುಕಯ್ಯನಿಗೆ ? "

" ಏನೆಂದೆ, ಯಾರನ್ನ ನೀನು ಹುಚ್ಚ ಅನ್ನೋದು ?...." ಆತ ಕುಳಿತಿದ್ದ ಕಡೆಯಿಂದ ಎದ್ದ.

" ನಿನ್ನನ್ನೇ ಕಣಯ್ಯಾ !....ಬಾ ಇಲ್ಲಿ....ಕುಕ್ಕೆ ಎತ್ತಿ ನಿನ್ನ ಮುಸುಡಿ ಕುಕ್ಕಿ ಹಾಕಿಬಿಟ್ಟೇನು...." ಅಂತ ಹೇಳುತ್ತಾ ಆಕೆ ರೈಲಿಂದ ಇಳದು ಆತನನ್ನ ಬಯ್ಯುತ್ತಾ ಹೊರಟುಹೋದಳು.

ಆಮೇಲೆ ಬಹಳ ಹೊತ್ತು ಯಾರೂ ಮಾತನಾಡಲಿಲ್ಲ.

ಹಾಸನ ಬಂತು....ದುದ್ದ ಸಮಿಾಪಿಸಿತು....

ಆಗ, ಪಕ್ಕದಲ್ಲಿದ್ದವರನ್ನ, ಆತ, :— " ರೀ, ಅರಸೀಕೆರೆಗೆ ಹೋಗ ಬೇಕಾದರೆ ಹಾಸನದಲ್ಲಿಳಿದು ಬೇರೆ ಗಾಡಿ ಹತ್ತಬೇಕಾಗುತ್ತೇನು?" ಎಂದರು.

" ಇಲ್ಲ, ಇಲ್ಲ, ಇದೇ ಗಾಡೀನೇ "

" ಮತ್ತೆ, ಅಲ್ಲಿ ನಿಂತಿದ್ದ ಗಾಡಿ ಯಾವೂರಿಗೆ ? "

---

ಕೋಪದ ಡೊಂಕು ೧೯

# ಕಾರ್ಯದರ್ಶಿಯ ಕೈವಾಡ



ಆ ದಿನ ಅಷ್ಟೇಕೆ ಕಿಡಿಕಿಡಿಯಾದೆ ಎಂದು ನನಗಿನ್ನೂ ಅರ್ಥವಾಗಿಲ್ಲ. ಊಟ ಮುಗಿಸಿ ಎಲೆ ಅಡಿಕೆ ಜಗಿಯುತ್ತಾ ಬಿದ್ದಿದ್ದೆ. ಅಡಿಗೆ ಎಂದಿನಹಾಗೆಯೇ ಇತ್ತು. ಮನೆಹುಡುಗರೆಲ್ಲರೂ ಶಾಲೆಗೆ ಹೋಗಿದ್ದರು. ಗಲಭೆ ಗಲೀಜು ಗೋಳು ಯಾವುದಕ್ಕೂ ಆಸ್ಪದವೇ ಇರಲಿಲ್ಲ. ಕೋ-ಆಪರೇಟಿವ್ ಸೊಸೈಟಿ ಯಿಂದ ಲಗ್ನಪತ್ರಿಕೆ ಬಂದು ಆಗಲೇ ಐದು ದಿನಗಳಾಗಿದ್ದುವು ; ದೇವೀರಯ್ಯ

ನವರಿಂದ ತಂದು ಭರ್ತಿಮಾಡುವ ಏರ್ಪಾಟೂ ನಡೆದಿತ್ತು. ಆದ್ದರೂ, ಆ ಕರ್ನಾಟಕ ಸಂಘದ ಕಾರ್ಯದರ್ಶಿ ಬಂದು, "ಕಳೆದ ವರ್ಷದ ಚಂದಾ ಹಣದ ಋಣ ತೀರಿಸಿಬಿಡಿ" ಎಂದು ಕೇಳಿದರೆ ನಾನು ಅವನನ್ನ ಬಾಯಿಗೆ ಬಂದಹಾಗೆ ಬೈದು ಕಳುಹಿಸಬಾರದಾಗಿತ್ತು. ಕೈಯಲ್ಲಿ ಎರಡು ರೂಪಾಯಿ ಇಲ್ಲದಿದ್ದ ಮಾತ್ರಕ್ಕೆ ಅರಿಷಡ್ವರ್ಗಕ್ಕೆ ಅವಕಾಶಕೊಡೋದೇ? ಇಂತಹ ವಿಷಯ ಸನ್ನಿವೇಶಗಳು ನೂರಾರು ಬಂದರೂ ನಾನು ನನ್ನ ಸಂಸಾರನೌಕೆ ಯನ್ನ ನಲವತ್ತು ವರ್ಷಗಳತನಕ ನಡೆಸಿಕೊಂಡು ಬಂದಿಲ್ಲವೆ?....

ಬಹುಶಃ ಆ ಮನುಷ್ಯ ಹಾದಿಯಲ್ಲಿ ನನ್ನೆದುರು ಸಿಕ್ಕಾಗಲೆಲ್ಲ, "ನಮಸ್ಕಾರ, ಸ್ವಾಮಿ!" ಎಂದು ಬುಸುಗುಟ್ಟುತ್ತಿದ್ದದ್ದನ್ನು ಕೇಳಿ ಕೇಳಿ ನನ್ನಲ್ಲಿ ಉದ್ರೇಕವಾಗುತ್ತಿದ್ದ ಕೋಪ ಜುಗುಪ್ಸೆ ಅಸಹ್ಯತೆ ಎಲ್ಲವೂ ಒಟ್ಟಾಗಿ ಸೇರಿ ಆ ದಿನ ಅವನ ಮೇಲೆ ವಿಷಕಾರುವ ಹಾಗೆ ಮಾಡಿತೋ ಏನೋ? "ನಮಸ್ಕಾರ, ಸ್ವಾಮಿ!" ಎಂದು ಅವನು ಹೇಳುವಾಗ ಅದರಲ್ಲಿ ಎಷ್ಟು ಅರ್ಥ ತುಂಬುತ್ತಿದ್ದ ಎಂಬುದು ನನಗೂ ಅವನಿಗೂ ಮಾತ್ರ ಗೊತ್ತಿರುವ ಗುಟ್ಟು. "ಬಿಡ್ರಿ, ಬಿಡ್ರಿ, ಕಂಡಿದೇನೆ! ನೀವೂ ಒಬ್ಬರು, ಈ ಊರಿನ ದೊಡ್ಡ ಮನುಷ್ಯರ ಪೈಕಿ! ಎರಡು ರೂಪಾಯಿ ಬಿಚ್ಚಿ ಬಿಸಾಡುವುದಕ್ಕೆ ಯೋಗ್ಯತೆ ಇಲ್ಲದೆ ಆರು ತಿಂಗಳಿಂದ ನನ್ನನ್ನ ಸತಾಯಿಸುತ್ತಿದೀರಾ! ಜರೀ ರುಮಾಲು ಬೇರೆ ನಿಮ್ಮ ಲಕ್ಷಣಕ್ಕೆ! ಎಸೆಯಿರಿ ತೆಗಿದು!" ಎಂದು ಹೇಳುವಹಾಗಿತ್ತು ಆಗಿನ ಅವನ ಮುಖಭಂಗಿ. "ಸ್ವಾಮಿ" ಎಂದು ಹೇಳುವಾಗಲಂತೂ ನಾನು ಅವನಕಡೆ ನೋಡುತ್ತಲೇ ಇರಲಿಲ್ಲ....

ಹೀಗೆ ನನಗೂ ಅವನಿಗೂ ಆಗಾಗ ಭೆಟ್ಟಿಯಾಗುತ್ತಿದ್ದರಿಂದ, ಆ ಮಧ್ಯಾಹ್ನ ಅವನು ಮನೆಗೆ ಬಂದಾಗ, "ನಿಮ್ಮ ಸಂಘ ಹಾಳಾಯಿತು, ಹೋಗಯ್ಯ! ಶುದ್ಧ ಉಂಡಾಡಿಗಳು, ಸೋಮಾರಿಗಳು. ತಿರುಪೆಗೆ ಮಾತ್ರ ಬರ್ತೀರಿ ರಶೀತಿ ಪುಸ್ತಕ ಹಿಡಿದುಕೊಂಡು! ಸಂಘದ ಹೆಸರು ಹೇಳುವುದು, ತಮ್ಮ ತಮ್ಮ ಹೊಟ್ಟೆ ತುಂಬಿಕೊಳ್ಳುವುದು....ಗೊತ್ತು ಗೊತ್ತು....ಊರಿಗೆಲ್ಲ ಗೊತ್ತಾಗಿದೆ....ಶುದ್ಧ ಹೆಗ್ಗಣಗಳು...." ಇತ್ಯಾದಿ ಇತ್ಯಾದಿ ಹೇಳಿಬಿಟ್ಟೆ. ಯಾವಾಗಲೂ ಬಹಳ ನಯವಾಗಿ, "ಅದಕ್ಕೇನಯ್ಯ, ಕೊಡದೇ ಉಂಟೇ ನಯ್ಯ, ಇಂಥಾದ್ದಕ್ಕಲ್ಲದೆ ಯಾವುದಕ್ಕಯ್ಯ, ನಾಳೆ ಸಂಜೆ ಬಂದು ಬಿಡಯ್ಯ"

ಎಂದು ಹೇಳುತ್ತಿದ್ದವನು ಇದ್ದಕ್ಕಿದ್ದ ಹಾಗೆ ತಿರುಗಿ ಬಿದ್ದಾಗ, ಆ ಬಡಪಾಯಿ ಪೆಚ್ಚಾದ. "ಓಕಳಿಯ ನೀರಿನಲಿ ಸಿಡಿಲು ಬಡಿದಂತೆ" ಅವನಿಗೆ ನೆಲೆ ತಪ್ಪಿತು. 'ಬಂದ ದಾರಿಗೆ ಚಂದ ಇಲ್ಲ'ವೆಂದು ಹೊರಟೇ ಹೋದ.

ಸದ್ಯಃ ನನ್ನ ಪುಣ್ಯವೆಂದೇ ಹೇಳಬೇಕು. ದೇಹ ಕೊಂಚ ಬಲಿಷ್ಠ. ಮನೆಯಲ್ಲಿ ನಾನೊಬ್ಬನೇ ಗಂಡಸು. ನನ್ನ ಮನೆದೇವರು ವೆಂಕಟರಮಣನೇ ಕಾಪಾಡಿದ. ಅವನ ಮನೆ ದೇವರು ನರಸಿಂಹ ಸ್ವಾಮಿಯಾಗಿದ್ದರೆ ನನ್ನ ಗತಿ ಏನು? ಮೈ ಕೈ ನೋವು ಹಾಗಿರಲಿ! ಅವಮಾನ? ಅವಳು ಬೇರೆ ಒಳಗಿದ್ದಳು! ಪತ್ರಿಕೆಗಳು ಬೇರೆ ಇಂಥದ್ದೇನಾದರೂ ಸಿಕ್ಕೀತೇ ಎಂದು ಕಾದಿರುತ್ತವೆ.... ಈ ಗಂಡಾಂತರವೇನೋ ತಪ್ಪಿತು. ಮುಂದಾದರೂ, ಯಾರ ಮೇಲೂ ರೇಗಬಾರದು ಎಂಬ ದೃಢಸಂಕಲ್ಪಕ್ಕೆ ಬಂದೆ. ಕುರ್ಚಿಯಿಂದ ಎದ್ದು ಶತಪಥ ತಿರುಗಿದೆ. ಆಮೇಲೆ, ತಲೆ ತಗ್ಗಿಸಿಕೊಂಡು, ನರಸಿಂಗ ರಾಯರ ಮನೆಗೆ ಹೋದೆ, ಪತ್ರಿಕೆ ಓದುವುದಕ್ಕೆ.

ಅಲ್ಲಿಂದ ದೇವೀರಯ್ಯನ ಮನೆಗೂ ನುಗ್ಗಿದೆ, ಸ್ವಾಪಿಕಾರ್ಯವಾದ ಮೇಲೆ ಸ್ವಕಾರ್ಯವನ್ನೂ ನಡೆಸಿ ಬಿಡೋಣ, ಅಂತ. ಅಲ್ಲಿ ಅಕಸ್ಮಾತ್ತಾಗಿ ವೆಂಕಟಗಿರಿ ಸಿಕ್ಕಿದ. ಮನೆಯೊಳಕ್ಕೆ ಕಾಲಿರಿಸಿದೆನೋ ಇಲ್ಲವೋ ಅವನ ಧ್ವನಿ ಕಿವಿಗೆ ಬಿತ್ತು. "ಓ ಹೊ ಹೊ! ಬಾರಯ್ಯ, ಲಕ್ಷ್ಮೀಪತಿ! ಒಳ್ಳೆಯ ಸಮಯಕ್ಕೆ ಸಿಕ್ಕಿದೆ. ನಾನೂನೂ ನಿನ್ನ ಮನೆಗೆ ಬರೋಣ ಅಂತಲೇ ಹೊರಟಿದ್ದೆ. ನೀನು ಇವತ್ತು ಊರಲ್ಲಿಲ್ಲದಿದ್ದರೆ ಏನಪ್ಪ ಗತಿ ಅಂತ ಹೆದರಿದ್ದೆ. ಸದ್ಯಃ ದೇವರು ದೊಡ್ಡವನು ಕೂತುಕೊ" ಅಂದ. ನನಗೆ ಯಾಕೋ ಕೂಡುವ ಮನಸ್ಸಿರಲಿಲ್ಲ. ಆದರೂ, ವೆಂಕಟಗಿರಿ ಮಗ ಗುಂಡನಿಗೆ ನನ್ನ ಮಗಳನ್ನು ಕೊಟ್ಟು ವೈಶಾಖದಲ್ಲಿ ಲಗ್ನ ಅಂತ ನಿಷ್ಕರ್ಷೆಯಾಗಿತ್ತು. ಆದ್ದರಿಂದ ನಾನು ಅವಳ ಅಭ್ಯುದಯವನ್ನೇ ಮುಂದಿಟ್ಟು ಅಲ್ಲೇ ಮುಂದಳಿಗೆಯ ಮೇಲೆ ಮಂಡಿಸಿದೆ. ಇದ್ದಕ್ಕಿದ್ದ ಹಾಗೆ ವೆಂಕಟಗಿರಿ "ನೀನು ಕರ್ನಾಟಕ ಸಂಘಕ್ಕೆ ಮೆಂಬರು ತಾನೆ?" ಅಂದ. ನನಗೆ ಕೆನ್ನೆಗೆ ಹೊಡೆದ ಹಾಗಾಯಿತು. ಆ ಹಾಳು ಸಂಘವನ್ನು ಮನಸ್ಸಿನಲ್ಲೇ ಶಪಿಸಿದೆ. ಎದೆಗೆಡದೆ ಮೆತ್ತಗೆ ಒಂದು ಉಪಾಯ ಹುಡುಕಿದೆ. ಅವರ ಪ್ರಶ್ನೆ ಕಿವಿಗೆ ಬೀಳದಂತೆ ನಟಿಸಿ, "ಹಳ್ಳಿ ಕಡೆ ಎಲ್ಲರೂ ಕ್ಷೇಮ ತಾನೆ? ಶಾಂತು ಜ್ವರ ಹೇಗಿದೆ? ಲಚ್ಚು ಪರೀಕ್ಷೆ

ಮುಗಿಯಿತೇ ? ” ಅಂದೆ. ಅವರು ಬಿಡಲಿಲ್ಲ. “ ಹಳ್ಳಿ ಯೋಗಕ್ಷೇಮ ಆ ಮೇಲೆ ವಿಚಾರಿಸುವಿಯಂತೆ. ಕೇಳಿದ್ದಕ್ಕೆ ಉತ್ತರ ಹೇಳು. ನೀನು ಈಗ ಕರ್ನಾಟಕ ಸಂಘಕ್ಕೆ ಮೆಂಬರ್ ಹೌದೋ ಅಲ್ಲವೋ ? ” ಎಂದು ಹಟ ಹಿಡಿದರು. ನಾನು ಏನು ಹೇಳಲಿ. ‘ ಹುಂ ’, ಎಂದೆ. ಆದರೆ ಹುಂನನ್ನು ಕೊಂಚ ಉದ್ದವಾಗಿ ಎಳೆದು ಮನಸ್ಸಾಕ್ಷಿಗೆ ಶಾಂತಿ ದೊರಕಿಸಿಕೊಂಡೆ.

“ ಹಾಗಾದರೆ ಒಳ್ಳೇದಾಯಿತು. ನೋಡು, ಇವತ್ತು ಸಂಜೆ.... ”

“ ಹೌದು ! ಮರೆತಿದ್ದೆ. ಸಂಘದ ವಾರ್ಷಿಕೋತ್ಸವ....ಬೆಂಗಳೂರಿಂದ ವಿಶ್ವನಾಥರಾಯರು ಬರುತ್ತಾರೆ ” ಎಂದು ನಾನೇ ಒದರಿದೆ. ( ಮಧ್ಯಾಹ್ನ ನನಗಿದೆಲ್ಲವೂ ಮರೆತೇ ಹೋಗಿತ್ತು. ಮೂರು ದಿನ ಭೃಂಗಾಮಲಕ ತೈಲ ತಪ್ಪಿದರೆ ಹಾಳು ಮೆದುಳು ಹೀಗೆ ಕೈಕೊಟ್ಟು ಬಿಡುತ್ತದಲ್ಲಾ ! ) ಹುಂ ವಿಶ್ವನಾಥರಾಯರ ಆಫೀಸಿನಲ್ಲಿ ಒಂದು ಟೈಪಿಸ್ಟ ಕೆಲಸ ಖಾಲಿ ಇದೆಯಂತೆ. ಗುಂಡು ಅರ್ಜಿ ಹಾಕಿದಾನೆ. ಅವರು ನೆಟ್ಟಗೆ ಟೌನಹಾಲಿಗೆ ಬಂದು, ಅಲ್ಲಿಂದ ನೆಟ್ಟಗೆ ಬೆಂಗಳೂರಿಗೇ ಹೊರಟುಬಿಡುತ್ತಾರಂತೆ. ಅವರ ಹೆಡ್ ಗುಮಾಸ್ತೆ ಹೇಳಿದರು, ನೀನು ಒಂದು ಮಾತು ಹೇಳಿದರೆ....”

“ ಇಲ್ಲ ! ಇಲ್ಲ ! ನಾವಿಬ್ಬರೂ ಮಲ್ಲೇಶ್ವರದಲ್ಲ...”

“ ಗೊತ್ತು ! ಗೊತ್ತು ! ಆದ್ದರಿಂದ ಅವರ ಕಿವಿಯಲ್ಲಿ ಒಂದು ಮಾತು ಹೇಳಿದರು. ನೋಡು ! ಗುಂಡನ ಯೋಗಕ್ಷೇಮ ಅಂದರೆ ನಿನ್ನದೂ ಹೊಣೆಗಾರಿಕೆ ಇಲ್ಲವೆ? ನಾಳೆಯೇ ನೌಕರಿ ಯಾರಿಗೆ ಅಂತ ತೀರ್ಮಾನಿಸಿ ಬಿಡುತ್ತಾರಂತೆ. ತಡಮಾಡಿದರೆ ಸರ್ವನಾಶ....”

“ ಇರಲಿ ! ನಿಧಾನವಾಗಿ....ಬೆಂಗಳೂರಿಗೇ ಹೋಗಿ....”

“ ಏನು ? ಆಗೋದಿಲ್ಲವೇನು ? ಗುಂಡನಿಗೇನು ಹೆಣ್ಣು ಸಿಗದೆ ನಾನು ನಿನ್ನ ಹತ್ತಿರ ಹಲ್ಲು ಕಿಸಿಯಲ್ಲಿಲ್ಲ, ಗೊತ್ತೇ ? ಚಾಕರಿ ಸಿಗದೆ ಮದುವೆ ಆಗುವುದಿಲ್ಲ ಅಂತ ಅವನು ಬೇರೆ ಹಟಹಿಡಿದು ಕೂತಿದಾನೆ, ಮನೆಯೊಳಗೆ....”

“ ಆಗಲಿ, ಹೇಳುತ್ತೇನಯ್ಯ.... ರೇಗ ಬೇಡ....ಅದಕ್ಕೇನು....? ”

“ ಹಾಗಾದರೆ ಹೊರಡು ಮತ್ತೆ ! ಆಗಲೇ ನಾಲ್ಕೂವರೆ ! ಡ್ರೆಸ್ ಗಿಸ್ ಮಾಡಿಕೊಂಡು ವೇದಿಕೆಯ ಮೇಲೆ ರಾಯರಹತ್ತಿರವೇ ಒಂದು ಕುರ್ಚಿ ಸಂಪಾದಿಸಿಕೊ....ನಿನಗೇನಯ್ಯ ? ಊರಿಗೆಲ್ಲ ನೀನೆ ದೊಡ್ಡಮನುಷ್ಯ

ಮೆಂಬರ್ ಬೇರೆ! ಸಂಗೀತವೋ ಗಿಂಗೀತವೋ ನಡೆಯುತ್ತಿರುವಾಗ ರಾಯರ ಕಿವಿ ಕಚ್ಚಿಬಿಡು....ಅಳಿಯನಾಗಿ ಮನೆಗೆ ಬರುತ್ತಾನೆ; ಕಾಪಾಡ ಬೇಕು, ಅನ್ನು. ಕೈಬಿಡುವುದಿಲ್ಲ ಅವರು....ತಮ್ಮ ಅಳಿಯಂದಿರು ಆರು ಜನಕ್ಕೂ ಅವರು ನೌಕರಿ ದೊರಕಿಸಿಕೊಂಡಿಲ್ಲವೇ?"

"ಹುಂ ನೋಡೋಣ...."

"ನೋಡೋಣ ಅಂದರೆ ಆಗದು....ವೈಶಾಖ ಮಾಸದಲ್ಲಿ...."

"ಆಗಲಪ್ಪ!"

ಮನೆಗೆ ಬಂದು ಅಂಗಿ ಹಾಕಿಕೊಂಡೆ. ರುಮಾಲನ್ನು ಬಿಚ್ಚಿ ಮತ್ತೆ ಬಿಗಿಯಾಗಿ ಸುತ್ತಿಕೊಂಡೆ. ಕನ್ನಡಿ ಎದುರು ಹೋಗಿ ನಿಂತುಕೊಳ್ಳುವುದಕ್ಕೆ ನಾಚಿಕೆ! ಥೂ! ಮಧ್ಯಾಹ್ನ ಆ ಕಾರ್ಯದರ್ಶಿಗೆ ಹಾಗೆ ಪ್ರಶ್ನಾರ್ಪನೆ ಮಾಡಿದ ಮೇಲೆ ಅಲ್ಲಿ ಮುಖತೋರಿಸುವುದು ಹೇಗೆ? "ಎದ್ದು ಹೋಗಯ್ಯ" ಎಂದು ಅವನು ಹೇಳದೆ ಇರುತ್ತಾನೆಯೇ? ಅಥವಾ ಅವನು ಬಾಯಿಬಿಟ್ಟು ಹೇಳ ಬೇಕೇನು? ಅದರಲ್ಲೂ ಚಂದಾಹಣವನ್ನು ಪೂರ್ತಿ ಕೊಟ್ಟು ಆಜೀವ ಸದಸ್ಯನ ಹಾಗೋ? ಅರೆಜೀವದ ಸದಸ್ಯನ ಹಾಗೋ? ಅಧ್ಯಕ್ಷರ ಸಮೀ ಪದಲ್ಲೇ ಹೋಗಿ ಕೂರುವುದು ಹೇಗೆ? ಉಭಯಸಂಕಟವಾಯಿತಲ್ಲಾ!.... ಎಂದು ಮುಂತಾಗಿ ಮೀನ ಮೇಷ ಎಣಿಸುತ್ತಾ ಟೌನ್‌ಹಾಲಿನ ಕಡೆ ನಡೆದೆ. ಬಾಗಿಲಲ್ಲಿ ಆ ಕಾರ್ಯದರ್ಶಿ ನಿಂತಿರುತ್ತಾನೆ; ಮೆಲ್ಲನೆ ಒಂದು ಮಂದಹಾಸವನ್ನು ಅವನೆದುರು ಬೀರಿ, ಕ್ಷಮಿಸಿ ಸ್ವಾಮಿ, ಎಂದು ಪಿಸುಗುಟ್ಟಿ ಒಳನುಗ್ಗುವುದು" ಎಂದು ನಿರ್ಧರಿಸಿದೆ. ಮಂದಹಾಸವನ್ನು ದಾರಿಉದ್ದಕ್ಕೂ ಅಭ್ಯಾಸ ಮಾಡಿದೆ. ಒಳಗೆ ಪ್ರವೇಶ ಮಾಡಿದ ಕೂಡಲೇ ಇತರರಂತೆ ನಾನೂ ಒಬ್ಬ ಸದ್ಗೃಹಸ್ಥನಾದ್ದರಿಂದ ನೆಟ್ಟಗೆ ವೇದಿಕೆಯ ಮೇಲಕ್ಕೆ ಹತ್ತಿ ರಾಯರ ಎಡಗಡೆ ಅವರ ಹಿಂದಿನ ಸಾಲಿನ ತೀರ ಹತ್ತಿರದ ಕುರ್ಚಿಯನ್ನು ವಶಪಡಿಸಿ ಕೊಳ್ಳುವದೆಂದು ತೀರ್ಮಾನಿಸಿದೆ. ರಾಯರ ಬಲ ಕಿವಿ ಕೊಂಚ ಮಧ್ಯಮ.

ವೆಂಕಟರಮಣನ ಕೃಪೆಯನ್ನು ಎಷ್ಟೆಂದು ಹೇಳಲಿ! ಕಾರ್ಯದರ್ಶಿಯ ಮುಖವೇ ಕಾಣೆ ಎಲ್ಲೂ! ಸಂಕೋಚವಿಲ್ಲದೆ, ನಾಲ್ಕೈದು ಗೆಳೆಯರೊಂದಿಗೆ ನಗುನಗುತ್ತಾ ಒಳನುಗ್ಗಿದೆ. ಆಗಲೇ ಜನ ತುಂಬಿ ಹೋಗಿತ್ತು. ಹೆಂಗಸರು ಮಕ್ಕಳ ಕಿಕ್ಕಿರಿತವೇ ಹೆಚ್ಚು. ವೇದಿಕೆಯ ಮೇಲೆ ನನ್ನ ಕುರ್ಚಿಯನು-

ಮಾತ್ರವೇ ಅಲ್ಲ, ಆ ಸಾಲೆಲ್ಲವನ್ನೂ ಆಗಲೇ ಯಾರೋ ಅನಾಮಧೇಯರು ಆಕ್ರಮಿಸಿ ಬಿಟ್ಟಿದ್ದರು. ನನ್ನ ಪಾಲಿಗೆ ಬಂದ ಆಸನವೆಂದರೆ ಅಧ್ಯಕ್ಷರ ಹಿಂದಿನ ಐದನೆಯ ಸಾಲು, ಬಲಗಡೆ, ಕಡೆಯ ಕುರ್ಚಿ! " ಗುಂಡನ ಕೆಲ ಸಕ್ಕೆ ಮೂರು ನಾಮ " ಎಂದು ಹೇಳುತ್ತಾ ಕುಳಿತೆ.

ಐದು ಗಂಟೆಗೆ ಬರಬೇಕಾಗಿದ್ದ ವಿಶ್ವನಾಥರಾಯರು ಐದೂ ಮುಕ್ಕಾ ಲಿಗೆ ಪಾದ ಬೆಳೆಸಿದರು. ಕಾರ್ಯದರ್ಶಿ ಅವರನ್ನು ಕರೆತಂದು ಮೇಲಕ್ಕೇ ರಿಸಿ (ಆಗ ನಾನು ನನ್ನ ಕುರ್ಚಿಯ ಕೆಳಗೆ ಬಿದ್ದಿದ್ದ ನನ್ನ ನಶ್ಯದ ಡಬ್ಬಿ ಯನ್ನು ಹೊರತೆಗೆಯುತ್ತಿದ್ದೆ) ಅಗ್ರಾಸನದಲ್ಲಿ ಕೂಡಿಸಿ ಪರಿಚಯ ಭಾಷಣ ಮಾಡಿದ. ಪ್ರಾರ್ಥನೆಯಾದ ಕೂಡಲೇ ಆತ ಮತ್ತೊಂದು ಸಾರಿ ವೇದಿಕೆ ಯನ್ನು ಹತ್ತಿದ. (ಆಗ ನನ್ನ ನಶ್ಯದ ಡಬ್ಬಿ ಮತ್ತೊಂದು ಸಾರಿ ಕೆಳಗೆ ಬಿತ್ತು) ಕಳೆದ ವರ್ಷ ಸಂಘದಲ್ಲಾದ 'ಕಾರ್ಯವಿಲಾಪ'ಗಳನ್ನು ವಿವರಿ ರಿಸಿದ. ಕೊನೆಗೆ " ಆಯುವ್ಯಯದ ಪಟ್ಟಿಯನ್ನು ಸಭೆಯ ಮುಂದಿಡಲು ಅಪೇಕ್ಷಿಸುತ್ತೇನೆ " ಅಂದ. ನನಗೆ ಅಲ್ಲಿರುವುದೇ ಬೇಡವಾಯಿತು. " ಈ ಕಗ್ಗವನ್ನೆಲ್ಲ ಇಲ್ಲಿ ಯಾಕೆ ಓದಬೇಕು? ಮನೆ ಕೊಳೆಯೆಲ್ಲ ಮಂದಿಯ ಮುಂದು ತರುವುದೇ? " ಎಂದು ನಾನು ಪಕ್ಕದಲ್ಲಿದ್ದವರಿಗೆ ಹೇಳಿದೆ. ಅದಕ್ಕೆ ಅವರು, " ಅವಶ್ಯವಾಗಿ ಓದಲೇಬೇಕು. ಯಾರು ಯಾರು ಭಂಡ ತನ ಮಾಡಿ ಚಂದಾ ಹಣ ಕೊಡದೆ ಮೆಂಬರು ಅಂತ ಮೆರೆಯುತ್ತಾರೋ ಅವರ ಹೆಸರೆಲ್ಲ ಹೊರಕ್ಕೆ ಬರಲೇಬೇಕು! " ಅಂದರು. ಲೋಕದಲ್ಲಿ ಇಂತಹ ಕ್ರೂರಾತ್ಮರೂ ಉಂಟೆ? ಎಂದು ನಾನು ಆಶ್ಚರ್ಯಪಟ್ಟೆ. ಆಗ ಕಾರ್ಯ ದರ್ಶಿ, " ಕಳೆದ ವರ್ಷದ ಚಂದಾ ಹಣವನ್ನು ಒಬ್ಬರು ವಿನಾ ಉಳಿದವರೆಲ್ಲ ರಿಂದಲೂ ವಸೂಲ ಮಾಡಿದೇನೆ " ಎಂದ. " ಆತನಿಂದ ಹಣವನ್ನು ಹೊರ ಗೆಡಹಲು ನಕ್ಷತ್ರಿಕನೇ ಮತ್ತೆ ಹುಟ್ಟಿಬರಬೇಕು! " ಎಂದ. ಮುಂದೆ ಕುಳಿ ತಿದ್ದ ಇಬ್ಬರು ಚಂಡಾಲರು, " ಅವರ ಹೆಸರೇನು ಸ್ವಾಮಿ? " ಎಂದು ಕೂಗಿದರು. ಕಾರ್ಯದರ್ಶಿ, " ನಾಗೇನಹಳ್ಳಿ ಲಕ್ಷ್ಮೀಪತಯ್ಯ " ಎಂದು ತನ್ನ ಗಾರ್ಧಭ ಧ್ವನಿಯಲ್ಲಿ ಕೂಗಿದ. ಸಭಿಕರ ಅವಹೇಳನವು ಅಲೆಅಲೆ ಯಾಗಿ ನನ್ನ ಕಿವಿಯ ಮೇಲೆ ಬಡಿಯಿತು. ಹಾಳಾದ ಕಾರ್ಯದರ್ಶಿ ಅಧ್ಯಕ್ಷರ ಬಲಗಡೆ ನಿಂತು ಹೆಸರು ಹೇಳಬಾರದಾಗಿತ್ತೆ. ಅವರೂ ನನ್ನಕಡೆ

ನೋಡಿದರು. ನನ್ನ ಹಿಂದಿನ ಪರಿಚಯವನ್ನು ನೆನಪು ಮಾಡಿಕೊಂಡು ಕೂಡಲೇ ಎದ್ದರು. ಸದ್ದಡಗಿತು. "ಪಾಪ! ಲಕ್ಷ್ಮೀಪತಿಗಳು ನನ್ನ ಪರಮ ಮಿತ್ರರು. ಅವರಿಗೆ ಯಾವ ಅನಾನುಕೂಲವಿತ್ತೋ ನಮಗೆ ತಿಳಿಯದು. (ಷೇಂ....ಷೇಂ....) ಹಾಗೆಲ್ಲ ಇಂಗ್ಲೀಷಿನಲ್ಲಿ ಕೂಗಬೇಡಿ....ಇದು ಕನ್ನಡ ಹಬ್ಬ! ಅವರ ಪರವಾಗಿ ಚಂದಾ ಹಣವನ್ನು ನಾನೇ ಕೊಡುತ್ತೇನೆ" ಎಂದು ಹೇಳಿ, ಕಾರ್ಯದರ್ಶಿಯೊಂದಿಗೆ ಏನೋ ಪಿಸುಗುಟ್ಟಿ, ಠಣ್, ಠಣ್ ಎಂದು ಎರಡು ರೂಪಾಯಿಗಳನ್ನು ಮೇಜಿನ ಮೇಲೆ ಬಡಿದರು; ನನ್ನ ಎದೆಗೆ ಎರಡು ಮೊಳೆಗಳನ್ನು ಬಡಿದ ಹಾಗಾಯಿತು. ಹಾಲಿನಲ್ಲೆಲ್ಲ ಹಾಹಾಕಾರ! "ನಾಚಿಕೆ ನಾಚಿಕೆ!" ಎಂಬ ಕೂಗು!

ನನಗೆ ದಾಹ ವಿಪರೀತವಾಯಿತು. ತಲೆ ತಿರುಗಿತು. ಕೂತಲ್ಲೇ ವಾಕರಿಕೆ ಬಂತು. ಹಿಂದಿನ ಬಾಗಿಲಿನ ಕಡೆ ಹೊರಟೆ. ಕಾರ್ಯದರ್ಶಿ ರಶೀತಿ ಸಹಿತವಾಗಿ ಅಲ್ಲೇ ನಿಂತಿದ್ದ. ಹೊರಕ್ಕೆ ಹಾರಿದೆ. ಯಾರೋ "ಲೋ! ಪರಾರಿ" ಎಂದು ಕೂಗಿದರು. ಧಡಧಡನೆ ಮನೆ ಸೇರಿದೆ. ವೈಶಾಖದ ಆಸೆ ಹಾಗಿರಲಿ, ಪ್ರಾಣದ ಮೇಲಿನ ಆಸೆಯೂ ಇಂಗಿತು.

ಮೂರು ದಿನಗಳಾದ ಮೇಲೆ ವೆಂಕಟಗಿರಿಯಿಂದ ಕಾಗದ ಬಂತು. ಟಪಾಲಿನವನು ಅದನ್ನು ಕಿಟಿಕಿ ಸಂದಿನಿಂದಲೇ ತುರುಕಿ ಹೋದ. "ನಿನ್ನ ಮಗನ ಹಾಗೇನೇ ಗುಂಡನನ್ನೂ ನೋಡಿಕೊಳ್ಳುತ್ತೇನೆ ಎಂದು ಹೇಳಿದ್ದು ಮರೆತು ಹೋಯಿತೇ? ಆ ದಿನ ನಾನು ಸಕಾಲದಲ್ಲಿ ಎಚ್ಚರಿಕೆ ಕೊಟ್ಟಾಗ್ಯೂ ನಿನ್ನೆ ಬೆಂಗಳೂರಿಗೆ ಹೋಗಿದ್ದಾಗ ಹೆಡ್-ಗುಮಾಸ್ತೆಯಿಂದ ತಿಳಿದು ಬಂದದ್ದೇನೆಂದರೆ, ಗುಂಡನ ವಿಷಯವಾಗಿ ನೀನು ರಾಯರಿಗೆ ಯಾವುದೂ ಹೇಳಲೇ ಇಲ್ಲ ಎಂದು! ನೀನು ಇನ್ನೆಲ್ಲಾದರೂ ವರಾನ್ವೇಷಣ...." ಎಂದು ಬರೆದೇ ಬಿಟ್ಟಿದ್ದ, ಲಲಿತು ಹಣೇಬರಹಾನ!

ಇನ್ನು ನನಗಿದ್ದದ್ದು ಒಂದೇ ಸಮಸ್ಯೆ. ರಾಯರಿಗೆ ಎರಡು ರೂಪಾಯಿ ಮನಿ ಆರ್ಡರ್ ಮಾಡಲೋ ಬೇಡವೋ? ಕಳುಹಿಸಿದರೆ, ಅವರಿಗೆ ಅವಮಾನ. ಕಳುಹಿಸದೆ ಇದ್ದರೆ, ನಾನು ಶತಭಂಡ! ದಿಗ್ಭ್ರಾಂತನಾಗಿ ದಿಂಬಿಗೆ ತಲೆ ಕೊಟ್ಟು ಯೋಚಿಸುತ್ತಿದ್ದಾಗ, ಟಪಾಲಿನವನು ಆ ದಿನವೂ ಕಿಟಕಿ ಕಂಡಿಯಲ್ಲಿ ಕಾರ್ಡು ತುರುಕಿದ. ವಿಶ್ವನಾಥರಾಯರಿಂದ!

" ನಾನು ಆ ದಿನ ಕೊಟ್ಟ ಎರಡು ರೂಪಾಯಿಗಳನ್ನು ನೀವು ನನಗೆ ಕಳುಹಿಸಬೇಕಾಗಿಲ್ಲ "....?....!....?...." ಅದನ್ನು ನನಗೆ ನಿಮ್ಮ ಸಂಘದ ಕಾರ್ಯದರ್ಶಿಯೇ ಕೊಟ್ಟಿದ್ದ. ಆತನ ಸಲಹೆ ಮೇರೆ ನಾನು ತಮ್ಮ ಪರ ವಾಗಿ ಚಂದಾಹಣ ಕೊಟ್ಟು ಬಾಕಿ ಪಟ್ಟಿಯನ್ನು ವಜಾ ಮಾಡಿಸಿದೆ. ತಾವು ಹಣ ಕೊಡುವವರಾದರೆ, ಕಾರ್ಯದರ್ಶಿ ಕೈಯ್ಯಲ್ಲೇ ಕೊಡಬಹುದು. "

ಅಲ್ಲಾ ! ಒಂದು ದಿನ ಕೊಂಚ ರೇಗಿದ್ದಕ್ಕೆ ಎಂತಹ ಶಿಕ್ಷೆ? ಕಾಸೂ ಉಳಿಯಲಿಲ್ಲ; ಕೀರ್ತಿಯೂ ಕೆಸರಾಯಿತು. ಕೈಗೆ ಬಂದ ವರನೂ ಜಾರಿ ಕೊಂಡ....ಎಲ್ಲಿಂದೆಲ್ಲಿಗ ?....

---

ಸಹತಾಪದ ಜೊಂಕು: ೨೦

# ಹಸ್ತಗುಣ

ನನ್ನ ಕೈಗೆ ಒಂದು ಗಂಡಾಂತರ ಬಂತು; ಎಡಗೈಗೆ. ಅದುವರೆಗೂ ಪಕ್ಕದಲ್ಲೇ ಗಂಭೀರವಾಗಿ ನೇತಾಡುತ್ತಿದ್ದದ್ದು ಇದ್ದಕ್ಕಿದ್ದ ಹಾಗೆ ಉಳು ಕಿತು. ಕೊಂಚ ಈ ಮಟ್ಟಕ್ಕೆ ಎತ್ತಿದೆನೆಂದರೆ ಬಾಯಿ ಬಡಿದುಕೊಳ್ಳುವಷ್ಟು, ಆ ಬಡಿತ ಕೇಳಿದ ಕಿವಿ ಒಡೆಯುವಷ್ಟು ನೋವು !

ಬೇಗ ಬೇಗನೆ ಅದನ್ನ ಡಾಕ್ಟರ್ ಹತ್ತಿರ ತೆಗೆದುಕೊಂಡು ಹೋಗಿ ವರದಿ ಒಪ್ಪಿಸಿದೆ. ಅವರು 'ನಾಲಿಗೆ ನೀಡು' 'ಕಿವಿ ಬಗ್ಗಿಸು' 'ಕೆಮ್ಮು' 'ಸೀನು' ಎಂದು ಮುಂತಾಗಿ ಹೇಳಿ ಮಾತಿನ ಮಧ್ಯದಲ್ಲೇ ನನ್ನ ಬಡ ಬಾಹುವನ್ನು ಹಿಡಿದು ಅಂತರಿಕ್ಷದ ಕಡೆಗೆ ಥಟಕ್ಕನೆ ಎತ್ತಿದರು. ಆಗ ನಾನು ಕೂಗಿಕೊಂಡದ್ದನ್ನು ಕೇಳಿ ಆಸ್ಪತ್ರೆಯಲ್ಲಿ ಮಲಗಿದ್ದವರೆಲ್ಲರೂ ಎದ್ದು ಓಡಿ ಬಂದರು. ಅವರನ್ನು ಹಿಂದಕ್ಕೆ ಕಳುಹಿಸಲು ನಾನು ಮತ್ತೊಂದು ಸಲ ಕೂಗಬೇಕಾಯಿತು. ಆ ಡಾಕ್ಟರು ಕೊಟ್ಟ ಚೀಟಿಗೆ ಬದಲಾಗಿ ನನಗೆ ಸಿಕ್ಕಿದ ಕೆಂಪು ಬಣ್ಣದ ಔಷಧಿ ಸಹಿತ ಮನೆಕಡೆ ಹೊರಟೆ.

ಪುಟ್ಟಶೀನು ಸಿಕ್ಕಿದ. “ಏನೋ ದೊಣ್ಣೆ ! ಚೆನ್ನಾಗಿದೀಯಾ? ” ಎಂದ. ‘ತಕ್ಕವುಟ್ಟಿಗೆ’ ಎಂಬ ಪೀಠಿಕೆ ಹಾಕಿ ನನ್ನ ಭುಜಬಲಿಪ್ರತಾಪ ವನ್ನು ಅವನಿಗೆ ವಿವರಿಸಿದೆ. “ಮೊದಲೇ ಹೇಳಬಾರದಾಗಿತ್ತೆ, ಮಂಕೆ? ನನಗೂ ಕಳೆದ ವರ್ಷ ತದ್ವತ್ತಾಗಿತ್ತು. ಹಾಳಾದ ಅವನ ಹತ್ತಿರ ಯಾಕೆ ಹೋದೆ ಬೆಳಗ್ಗೆ ಎದ್ದು?” ಎಂದ. “ಇನ್ನೇನೂ ಇಲ್ಲ, ಪುಟ್ಟಶೀನು! ಈ ಎತ್ತರಕ್ಕೆ ಎತ್ತಿದರೆ....ಅಯ್ಯೋ....” ಎಂದೆ. ಆಗ ಪುಟ್ಟಶೀನು, “ಅಲ್ಲೇ! ಅಲ್ಲೇ ನನಗೂ ಪ್ರಾಣ ಹಾರುತ್ತಾ ಇದ್ದದ್ದು. ಎಲ್‌ಬೋಸಿಸ್, ಕಣೊ, ಅದು. ಕೆಟ್ಟ ಖಾಯಿಲೆ. ಕೈಕೊಟ್ಟು ಬಿಡುತ್ತದೆ. ಹುಡುಗಾಟ ಆಡಬೇಡ. ಅಲ್ಲವೋ! ನಿನ್ನ ತುತ್ತಿನ ಚೀಲದೊಳಕ್ಕೆ ಈ ಕೆಂಪೌಷಧಿ ಹುಯ್ದರೆ, ಅದ ರೊಳಗಿಂದ ಅದು ಚಿಮ್ಮಿ ತೋಳಿನ ತನಕ ಹರಡುತ್ತದೆಯೋ? ನನಗೇನೋ ಅನುಮಾನ! ಬಿಸಾಕೋ, ಶೀಷೇನ! ಡಾಕ್ಟರ್ ಚಟ್ಟಾಭಿ ಅಂತ ಇದಾರೆ! ದೊಡ್ಡಪೇಟೆ ಕೊನೆಯಲ್ಲಿ. ನೆಟ್ಟಗೆ ಅವರನ್ನ ಹೋಗಿ ನೋಡು. ಮೂರು ದಿವಸದಲ್ಲಿ ಕೈ ಬೀಸಿಕೊಂಡು ತಿರುಗಾಡಬಹುದು. ವಾಸಿ ಆಗದಿದ್ದರೆ ನನ್ನ ಕಪಾಳಕ್ಕೆ ಹೊಡಿ” ಎಂದ.

ಮುಂದಕ್ಕೆ ಮೂರು ಹೆಜ್ಜೆ ಹಾಕಿದೆ. ಪುಟ್ಟರಾಮು ಸಿಕ್ಕಿದ. ಅವ ನಿಗೂ ನನ್ನ ಭುಜ ಕೀರ್ತಿಯನ್ನು ವಿವರಿಸಿದೆ. “ಎಲ್ಲಿಯ ತನಕ ಎತ್ತಿದರೆ ನೋವು....ಹೇಳು” ಎಂದು ಕೇಳುತ್ತಾ ಅವನು ತನ್ನ ಎಡಗೈಯನ್ನು ನಾಜಿ ನಮುಸ್ಕಾರದಂತೆ ನಿಧಾನವಾಗಿ ಏರಿಸಿದ. “ಅಕೋ! ಈಗ! ಅಲ್ಲೇ!” ಎಂದು ನಾನು ತಲೆ ಆಡಿಸಿದೆ. “ಹೋದ ದೀಪಾವಳಿ ದಿನ ನನಗೂ ಹೀಗೆಯೇ ಆಗಿತ್ತು ಮಾವನ ಮನೆಯಲ್ಲಿ! ಇದಕ್ಕೆಲ್ಲ ಆಯುರ್ವೇದವೇ ಸರಿ, ಕಣಯ್ಯ! ಅಷ್ಟಾಂಗಹೃದಯ ಅಂದರೆ ಏನು ಗೊತ್ತೇ? ಎಂಟು ಅಂಗಗಳ ಹೃದಯವನ್ನೂ ತಿಳಿಸುವ ಶಾಸ್ತ್ರ. ಎಡಗೈ ಕೂಡ ಆ ಎಂಟ ರಲ್ಲೊಂದು. ತಡ ಮಾಡಿದರೆ ತಾಪತ್ರಯ. ಆಚೆ ಬೀದಿಯಲ್ಲಿ ದತ್ತೊ ಪಂಡಿತರಿದಾರೆ. ಧನ್ವಂತರಿಯ ಪರಾವತಾರ; ಯಾರಿಗೂ ತಿಳಿಯದು ಅಷ್ಟೆ. ಹೋಗಿ ಅವರಿಂದ ವಾಮೋಪಚಾರ ಮಾಡಿಸಿಕೊ” ಎಂದ.

ಮುಂದಿನ ಚೌಕದಲ್ಲೇ ಪುಟ್ಟಸ್ವಾಮಿ ನನ್ನನ್ನ ಎದುರುಗೊಂಡ, ಅವನ ತಮ್ಮನಿಗೂ ಇದೇ ಕಷ್ಟಾಂಗವಾಗಿತ್ತಂತೆ. ಮೊದಲು ಎಡಗೈಯಲ್ಲಿ

ತೋರಿಕೊಂಡು ಬರಬರುತ್ತಾ ಮೈಯೆಲ್ಲ ತೂರಿಬಿಟ್ಟಿತಂತೆ. "ಇನ್ನೇನು? ಹುಡುಗನನ್ನ ಎತ್ತಿ ಕಡೆಯ ಮೆರವಣಿಗೆ ಹೊರಡಿಸೋಣ" ಎಂದಿದ್ದರಂತೆ. ಇಪ್ಪತ್ತೆರಡು ವರ್ಷ, ಮದುವೆಯಾಗಿ ಎಂಟು ತಿಂಗಳು. ಹರಹರ ಅಂತ ಬಂದೇ ಬಿಟ್ಟಿತ್ತು ಬಾಯಲ್ಲಿ. ಅಷ್ಟರಲ್ಲಿ ಯಾವನೋ ವೈದ್ಯ ಬದುಕಿಸಿದ ನಂತೆ. ಆತನ ವಿಳಾಸ ಬರೆದುಕೊಟ್ಟು, "ಬದುಕೋ!" ಎಂದು ಬೆನ್ನು ತಟ್ಟಿ ಪುಟ್ಟಸ್ವಾಮಿ ಹೊರಟೇ ಹೋದ.

ಮಾರ್ಕೆಟ್ ಹತ್ತಿರ ಸಿಕ್ಕಿದ ಪುಟ್ಟವೀರಪ್ಪನಿಗೆ ಮೊನ್ನೆ ತಾನೆ ಹೀಗಾ ಗಿತ್ತಂತೆ. ಹುಬ್ಬಳ್ಳಿ ಸಮೀಪದಲ್ಲಿ ಇರುವ ಒಬ್ಬರ ಹೆಸರು ಹೇಳಿದ. "ನನ ಗಾದದ್ದು ಬಲಗೈಗೆ. ಅದಕ್ಕೆ ಬಲ ಹೆಚ್ಚು! ನಿನ್ನ ಎಡಗೈ ನಿನ್ನ ಹೃದಯಕ್ಕೆ ತೀರ ಹತ್ತಿರ ಇದೆ. ಆದ್ದರಿಂದ ನನಗೆ ಕೊಟ್ಟ ಮುಲಾಮನ್ನೇ ನಿನಗೆ ಕೊಡ ಲಾರರು. ಆದರೂ ಅವರು ಬುದ್ಧಿವಂತರು. ನೀನು ಈಗಲೇ ಹುಬ್ಬಳ್ಳಿ ರೈಲು ಹತ್ತಿದರೆ ನಮ್ಮೆಲ್ಲರಿಗೂ ಕ್ಷೇಮ" ಎಂದು ಎಚ್ಚರಿಸಿದ.

ಪುಟ್ಟು ಕೂಡ ಅದೇ ದಾರಿಯಲ್ಲಿ ಬರುತ್ತಿದ್ದ. ಅವನ ಚಿಕ್ಕಪ್ಪನಿಗೂ ಯಥಾಪ್ರಕಾರ ಇದೇ ಗೋಳಾಗಿತ್ತಂತೆ. ಆರು ತಿಂಗಳು ಹಾಸಿಗೆಯಲ್ಲೇ ಹೊರಳಾಡಿದರಂತೆ. ಬೆನ್ನು ಬಗ್ಗಿಸುವುದಕ್ಕಾಗದು; ತಲೆ ತಗ್ಗಿಸುವುದಕ್ಕಾಗ ದಂತೆ. "ಶೀತರೆ ವಾತಕ್ಕೆ ಕೋಪ; ವಾತರೆ ಶೀತಕ್ಕೆ ಕೋಪ" ಎಂದು ನನಗೆ ಗಾಬರಿಯಾಯಿತು. "ಹೆದರಬೇಡ ಕಣೊ! ಒಬ್ಬರು ಯುನಾನಿ ಹಕೀ ಮ್ಲರು ಒಂದೇ ಒಂದು ವಾರದಲ್ಲಿ ಎಲ್ಲಾನೂ ಇಲ್ಲಾ ಅನ್ನಿಸಿಬಿಟ್ಟರು, ಕಣೊ! ಆ ಮಹಾರಾಯನ ಫೋಟೋ ಇಟ್ಟುಕೊಂಡು ದಿನವೂ ನಮ್ಮ ಚಿಕ್ಕಪ್ಪ ಅದಕ್ಕೆ ಸಲಾಮು ಮಾಡುತ್ತಿದಾರೆ, ಬೇಕಾದರೆ ನೋಡು ಬಾ!" ಎಂದ. ಅವರ ವಿಳಾಸವನ್ನ ಇಂಗ್ಲೀಷಲ್ಲೇ ಬರೆಸಿಕೊಂಡೆ..

ಎಡಗೈಯಿಂದ ಎದೆಗೂ ನೋವು ಹರಡುತ್ತಾ ಇತ್ತು. ನಿಧಾನವಾಗಿ ಮನೆ ಸೇರಿ ಮಂಚದ ಮೇಲೆ ಪವಡಿಸಿದೆ. ಕಳೇಬರ ಕೂಳೇಬರವಾದರೆ ಗತಿ ಏನು, ಎಂದು ಹೆದರಿ ಬೆವರಿದೆ. ತಲೆಸಿಡಿತ ವಿಪರೀತವಾಯಿತು. ಬೆನ್ನೆಲು ಬಿನ ಕಡೆಗೆ ನೋವು ಹರಿದಾಡುತ್ತಿದ್ದದ್ದು ಗೋಚರವಾಯಿತು. ಪುಟ್ಟು ಚಿಕ್ಕಪ್ಪನ ಹಾಗೆ ಹೊರಳಿದೆ. "ದೇವರೇ!" ಎಂದೆ. "ಹೀಗೆ ಕೈ ಬಿಡ

ಬಹುದೆ ? ” ಎಂದು ಅಂಗಲಾಚಿದೆ. “ ಬೆಳಗಾಗುವ ತನಕ ಬದುಕಿದ್ದರೆ ನೆಟ್ಟಗೆ. ಡಾ. ಚಟ್ಟಾಭಿ ಅಂಗಡಿಗೆ ಹೊರಟೇ ಬಿಡುವುದು....ಬೇಡ ! ಧನ್ವಂತರಿಯೇ ಸರಿ....ಅಥವಾ, ಹುಬ್ಬಳ್ಳಿಗೆ ಹೊರಡೋಣವೋ....ಹುಬ್ಬಳ್ಳಿ? ....ಯಾಕೆ ?....ಯೂನಾನಿಯೇ ಸಾಕು...ಸಾಕು ಎಂಬ ಮಾತಲ್ಲ.... ಯೂನಾನಿಯೇ ಬೇಕು !....ಸದ್ಯಕ್ಕೆ ಈ ಶೀಷೆ ಔಷಧಿ ಒಂದು ಗುಟುಕು ಹಾಕಿರೋಣ ತುತ್ತಿನ ಚೀಲದೊಳಕ್ಕೆ ! ” ಎಂದು ನಿಶ್ಚಯಿಸಿ ಕಿಟಕಿಯ ಕಡೆ ಮಲಗಿಕೊಂಡೇ ಕೈನೀಡಿದೆ.

ಮರೆತು ಎಡಗೈಯನ್ನೇ ನೀಡಿಬಿಟ್ಟೆ ! ಆದರೇನು ?.... ನೋವಿಲ್ಲ ! ಎಡಗೈ ! ನೋವಿಲ್ಲ ! ಎದ್ದು ಕೂತು ಮೇಲಕ್ಕೆತ್ತಿದೆ. ಗಿರಗಿರನೆ ಬೀಸಿದೆ. ನೋವಿಲ್ಲ. “ ಪುಟ್ಟ ವೀರು ” ಎಂದು ಕೂಗಿದೆ. ಖಾಯಿಲೆಯಾಗಿದ್ದದ್ದು ಬಲಗೈಗೋ ಎಂಬ ಅನುಮಾನ ಬಂತು. ಅದನ್ನೂ ಬೀಸಿದೆ. ನೋವಿಲ್ಲ !.... ....!....!

ನಿಮ್ಮಲ್ಲಿ ಯಾರಿಗಾದರೂ ಹಸ್ತಗುಣ ಕೆಟ್ಟು ಹೋಗಿ ಖಾಯಿಲೆಯಾಗಿ ಮೇಲುಮೇಲಕ್ಕೆ ಎತ್ತುವಾಗ, ಮುಂದುಮುಂದಕ್ಕೆ ನೀಡುವಾಗ, ನೋವಾದರೆ, ನಾನೂ ಒಬ್ಬರ ವಿಳಾಸ ಕೊಡುತ್ತೇನೆ; ಬರೆದುಕೊಳ್ಳಿ. ಇಂಥದ್ದಕ್ಕೆಲ್ಲ ಎತ್ತಿದ ಕೈ ಅವರು ! ಅವರಿಂದ ಚೀಟಿ ಪಡೆದು ಆ ಆಸ್ಪತ್ರೆಯಿಂದ ಒಂದು ಶೀಷೆ ಕೆಂಪು ಔಷಧಿ ತಂದು ದೂರದ ಕಿಟಕಿಯಲ್ಲಿಟ್ಟು ಮಲಗಿಕೊಂಡೇ ಕೈ ನೀಡಿ, ಸಾಕು ! ಔಷಧಿ ಕುಡಿಯುವುದೇ ಬೇಕಿಲ್ಲ.... ಹಸ್ತ ಗುಣವಾಗುತ್ತೆ.

---

# ಇಬ್ಬರ ನಡುವೆ



ಮೊನ್ನೆ ವಕೀಲ್ ಶ್ರೀನಿವಾಸರಾಯರ ಮನೆಗೆ ಊಟಕ್ಕೆ ಹೋದೆ; ಅವರ ಮೊಮ್ಮಗನ ಚೌಳ ಸಮಾರಂಭ! ಕ್ಷೌರಕ್ಕೆ ತಲೆ ತೆತ್ತ ಹುಡುಗನ ತಂದೆ, ಅಂದರೆ, ರಾಯರ ಅಳಿಯ, ನನ್ನ ಸಹಪಾಠಿ. ನಾನೊಬ್ಬ ಶಾಲಾ ಮಾಸ್ತರು; ನನ್ನ ಸಹಪಂಕ್ತಿಗರೆಲ್ಲರೂ ವಕೀಲರು. ಅಂದಿನ ಮುಖ್ಯ ಭಕ್ಷ್ಯ ವಾದ ಲಾಡು ಬರುವ ತನಕ ಅವರ ಮಾತೆಲ್ಲ ಕೋರ್ಟು ಕಟ್ಟಳೆ ಕಾನೂನು ಕಕ್ಷಿಗಾರರು ಖೂನಿ ಕಳ್ಳತನ ಕೈಫಿಯತ್ತು ಮುಂತಾದ ಸ್ವವಿಷಯಗಳಲ್ಲೇ ಓಡಾಡಿತು. ಕಾಗೆಗಳ ನಡುವಣ ಕಪೋತದ ಹಾಗೆ ನಾನು ನನ್ನ ಕೆಲಸ ದಲ್ಲೇ ನಿರತನಾಗಿ ತಲೆತಗ್ಗಿಸಿ ಕುಳಿತಿದ್ದೆ. ಎರಡು ಲಾಡು ಹಾಕಿಸಿಕೊಂಡೆ. ನನ್ನ ಬಲಗಡೆಯವರು ಒಂದನ್ನೂ ಕೂಡ ಒಲ್ಲೆ ಎಂದರು. ಎರಡೂ ಕೈಗಳನ್ನು ಎಲೆಗೆ ಅಡ್ಡವಾಗಿ ಹಿಡಿದು ಬೇಡಬೇಡವೆಂದು ಬಡಬಡಿಸಿ ಬಡಿಸು ವವರನ್ನು ಹೆದರಿಸಿ ಓಡಿಸಿದರು.

ಆಮೇಲೆ ಅವರು ನನ್ನ ಕಡೆ ತಿರುಗಿದರು. "ಲಾಡು ತಿಂದರೆ ನನಗೆ ರಾತ್ರಿ ನಿದ್ದೆಯೇ ಬರುವುದಿಲ್ಲ" ಎಂದರು. ಅದುವರೆಗೂ ಅವರ ಕಸಬಿನ ವಿಷಯವನ್ನು ಮಾತ್ರ ಪ್ರಸ್ತಾಪಿಸಿ ನನ್ನನ್ನು ಬೇರಿರಿಸಿ ಅವಮಾನ ಪಡಿಸಿದ ವ್ಯಕ್ತಿಗೆ ಈಗ ಗೋಳು ಹುಯ್ಯಲು ನನ್ನ ಕಿವಿ ಬೇಕಾಯಿತೆ ಎಂದು ನಾನು ರೇಗಿ, ರೇಗನ್ನು ನುಂಗಿ, ಲಾಡುಗಳ ಧ್ವಂಸದಲ್ಲೇ ಸಕಲ ಗಮನವನ್ನೂ ಇಟ್ಟೆ. "ನೋಡಿ! ಹೆಚ್ಚಾಗಿ ತಿಂದರೆ ನನಗೆ ಹೊಟ್ಟೆ ಉಬ್ಬುತ್ತೆ....ನಿಮ್ಮ ಬಲವಂತಕ್ಕೆ ನಾನು ಲಾಡು ಹಾಕಿಸಿಕೊಂಡೆ, ಅನ್ನಿ....ಗಂಟಲಲ್ಲಿ ಒಂದು ತರಹ ಕೆರೆತ...." ಎಂದು ಮುಂದುವರಿಸಿದರು.

ನನ್ನ ನಾಲಿಗೆಗೆ ಸಿಹಿ ಹತ್ತಿರುವ ವೇಳೆ ಅವರ ಕೆರೆತದ ಮಾತು ನನಗೆ ರುಚಿಸಲಿಲ್ಲ. ಆದರೂ ಹಾಳು ಮರ್ಯಾದೆ ಎಂಬುದೊಂದು ಇದೆಯಲ್ಲಾ!

ಶಾಲಾ ಮಾಸ್ತರುಗಳು ಅವನ್ನು ಪರಿಪಾಲಿಸದೆ ಇದ್ದಲ್ಲಿ ಮುಂದಿನ ಪೀಳಿಗೆಯ ಗತಿ ಏನು?.... "ಹಾ!" ಎಂದೆ.

"ಹುಂ! ರಾತ್ರಿ ಹಾಸಿಗೆ ಹಾಸಿ ಮಲಗಿದೆ ಆದರೆ ಬರೀ ಆಕಳಿಕೆ, ಬೆಳಗಾಗುವ ವರೆಗೂ....ನಿದ್ದೆ ಇಲ್ಲ! ಹೊಟ್ಟೆಯೊಳಗೆ ಧಾಂದಲೆ, ತಳಮಳ ಕೋಲಾಹಲ, ಡೊಂಬಿ, ಚಳುವಳಿ...."

"ಅಜೀರ್ಣ, ಅನ್ನಿ"

"ಹುಂ, ಅಂತೀನಿ, ಅದಕ್ಕೇನು? ಆದರೆ ನನ್ನ ಅಜೀರ್ಣದ ರೀತಿಯೇ ಬೇರೆ, ನಿಮಗೆ ಅಜೀರ್ಣ ಅಂದರೆ ಹೊಟ್ಟೆಗೊಂದಕ್ಕೇ ಸಂಕಟ....ನನಗೆ ಹಾಗಲ್ಲ....ತಲೆಸಿಡಿತದಿಂದ ಹಿಡಿದು ಹಿಮ್ಮಡಿ ನೋವಿನ ವರೆಗೂ"

"ಅಯ್ಯೋ, ಅಯ್ಯೋ"

"ಯಾವ ಔಷಧೀನೂ ಸರಿ ಬೀಳುತ್ತಿಲ್ಲ; ಇಪ್ಪತ್ತು ವರ್ಷದಿಂದ...."

"ಛೆ! ಛೆ!"

"ತಿಂದ ಅನ್ನ ಅರಗುತ್ತಿಲ್ಲ; ಸಾವಿರಾರು ರೂಪಾಯಿ ಗಂಟು ಮಾತ್ರ ಕರಗಿ ಹೋಯಿತು...."

"ಹಾಗೇನು?" ಎಂದೆ.

ಆಗ, ನನ್ನ ಎಡ ಪಕ್ಕದ ಲಾಯರು ನನ್ನ ಗಮನವನ್ನು ತಮ್ಮ ಕಡೆಗೆ ಸೆಳೆದು, "ಮಾಸ್ತರೇ! ಇಲ್ಲಿ ಕೇಳಿ, ಇಲ್ಲಿ! ಅವರ ಹಾಳು ಅಜೀರ್ಣ ಹಾಗಿರಲಿ! ನನ್ನ ಪಿತ್ತದ ವಿಷಯ ಕೇಳಿ" ಎಂದು ಪ್ರಾರಂಭಿಸಿದರು. "ನನ್ನ ಪಿತ್ತ ಪ್ರಕೋಪಿಸಿ ಬಿಟ್ಟರೆ, ಥೂ....ಥೂ! ಅದಕ್ಕೇ ನನ್ನ ಬಾಯಿ ದುರ್ವಾಸನೆ!"

"ಅವರ ಪಿತ್ತವೇನು, ಮಹಾ, ಮಾಸ್ತರೆ! ಅವರಿಗೆ ನಿದ್ದೆಯೊಂದು ತಪ್ಪಿಲ್ಲವಲ್ಲಾ! ನಾನು ರಾತ್ರಿಯೆಲ್ಲ ಪಿಳಪಿಳನೆ ಕಣ್ಣು ಬಿಟ್ಟುಕೊಂಡು ಎಲ್ಲಿ ಯಾವಕಡೆ ಸದ್ದಾದರೂ ಕಳ್ಳ, ಪಿಶಾಚಿ, ಅಂತ ಹೆದರಿಕೊಂಡು...."

"ನಿದ್ದೆ ಬರದೆ ಇದ್ದರೆ ಒಂದು ಭಾಗಕ್ಕೆ ಅನುಕೂಲವೇ....ಆದರೆ, ನನ್ನ ಹಾಗೆ ಎದ್ದ ಕೂಡಲೇ ವಾಂತಿ!...."

"ವಾಂತಿ ಮಾಡಿದ ಕೂಡಲೇ ಎಷ್ಟಾದರೂ ಕೊಂಚ ಆರಾಮವಾಗುವುದಿಲ್ಲವೆ, ದೇಹಸ್ಥಿತಿ? ನೀವೇ ಹೇಳಿ, ಮಾಸ್ತರೇ! ನನ್ನ ಗೋಳು ಕೇಳಿ ಕೊಂಚ....ತಲೆಸಿಡಿತ ಹೊಟ್ಟೆನೋವು...."

“ ಅವರ ಗೋಳೇನು ಮಹಾ ! ನನ್ನ ಹೊಟ್ಟೆಯೊಳಗಿನ ಪಿತ್ತಕೋಶ ಕೆರಳಿತು ಎಂದರೆ....”

“ ನಿಮ್ಮ ಪಿತ್ತದ್ದೇನು ನನ್ನ ಅಜೀರ್ಣದಷ್ಟು ಅವಾಂತರವಾಗುವುದಿಲ್ಲ. ನನಗಂತೂ, ಮಾಸ್ತರೆ, ಒಂದೊಂದು ಸಲ ಹುಳಿ ತೇಗುಗಳು ಪ್ರಾರಂಭವಾಯಿತೆಂದರೆ, ಥೂ ಥೂ ಥೂ....”

ಆಗ ನನ್ನ ಸಹಪಾಠಿ ನನ್ನೆಲೆಗೆ ಇನ್ನೊಂದು ಲಾಡು ಬಡಿಸಿದ.

“ ಖಾಲಿ ತೇಗಿಗೆ ಇಷ್ಟೊಂದು ರಂಪ ಮಾಡುತ್ತಾರಲ್ಲಾ ಅವರು....” ಎಂದು ನನ್ನ ಎಡಪಕ್ಕದವರು ಮಾತು ತೆಗಿದರು. “ ದೇವರೇನಾದರೂ ಅವರಿಗೂ ನನ್ನ ಹಾಗೆ ಪಿತ್ತರಸ ಉಕ್ಕಿ ಬರುವ ಹಾಗೆ ಮಾಡಿದ್ದರೆ....ಇಲ್ಲ, ಕೇಳಿ, ಮಾಸ್ತರೇ! ಅನೇಕ ವೇಳೆ ನನಗೆ ಊಟದ ನಡುವೆ ಇದ್ದಕ್ಕಿದ್ದ ಹಾಗೆ....”

ಆಗ ಅವರಿಗೆ ಖೀರು ಕೇಳಿದರು. ಅವರಿಬ್ಬರೂ ಒಲ್ಲೆ ಅಂದರು ಅದನ್ನು ಹಾಕಿಸಿಕೊಳ್ಳುವುದಕ್ಕೆ ನನಗೂ ಮನ ಬರಲಿಲ್ಲ. ಆದರೆ, ಅವರಿಬ್ಬರ ಬಲವಂತದಿಂದ ಶ್ರೀನಿವಾಸರಾಯರು ನನ್ನ ಬಟ್ಟಲನ್ನು ತುಂಬಿದರು.

“ ನೋಡಿ, ನೀವು ಕುಡಿಯುತ್ತಿದೀರಲ್ಲ, ಇಷ್ಟು ಖೀರು ಕುಡಿದರೆ ಸರಿ, ನನ್ನ ನಡುಹೊಟ್ಟೆಯೊಳಗೆ ಒಂದು ಪೀಡೆ ಪ್ರಾರಂಭವಾಗುತ್ತೆ, ಅಯ್ಯೋ, ಅಯ್ಯೋ, ಅವರ ಮುಂದೆ ಯಾವ ಕ್ರಾಂತಿಯೂ....”

“ ನಡುಹೊಟ್ಟೆ ಎಷ್ಟೋ ವಾಸಿ! ಪಿತ್ತ ಹೆಚ್ಚಾದರೆ, ಏನಾಗುತ್ತೆ ಗೊತ್ತೆ....ನಾಲಿಗೆ ಉದ್ದಕ್ಕೂ ಕಹಿಯಾಗಿರುತ್ತೆ....ಎಂತಹ ಖೀರು ಸೋಕಿದರೂ ಕೂಡ ಕ್ವೀನೀನಿನ ಪಾಕ ಇಳಿಸಿದ ಹಾಗೆ....”

“ ಯಾಕೆ, ಎದ್ದು ಬಿಟ್ಟಿರೇನು ?....ಅಜೀರ್ಣದ ಬಾಧೆ ಇಲ್ಲದೆ ಇರುವ ನೀವು ಇನ್ನೂ ಒಂದು ಬಟ್ಟಲು ಇಳಿಸಬಹುದಾಗಿತ್ತು ”....

“ ಏನು ಇನ್ನೂ ಒಂದು ಬಟ್ಟಲು! ಅವರು ಆಗಲೇ ಕುಡಿದ ಖೀರಿನ ಹತ್ತನೆಯ ಒಂದು ಭಾಗ ನನ್ನ ತುಟಿಗೆ ಸೋಕಿದರೂ ಕೂಡ ನಾನಿಲ್ಲೇ ವಾಂತಿ ಮಾಡಿ....”

ಮುಂದಿನ ಮಾತು ಕಿವಿಗೆ ಬೀಳಲಿಲ್ಲ. ಕೈತೊಳೆದು ನಾನು ಹಿತ್ತಲ ಬಾಗಿಲಿಂದ ತೂರಿಕೊಂಡು ನನ್ನ ಮನೆಗೆ ಓಡಿದೆ.

---

# ವಾತಾಪಿ



ಮುಂದಿನ ಸಾಲಿನ ನಟ್ಟನಡುವೆ ಎತ್ತರದ ದಿಂಬಿನ ಪೀಠದಲ್ಲಿ ಕುಳಿತಿದ್ದ ರಾವ್ ಬಹದ್ದೂರರು ತಮ್ಮ ವಿಸಿಟಿಂಗ ಕಾರ್ಡಿನ ಹಿಂಭಾಗದಲ್ಲಿ ಏನನ್ನೋ ಬರೆದರು. ಮೂರೇ ಮೂರು ಮಾತು. ೩-೩-೨, ಒಟ್ಟು ಎಂಟೇ ಎಂಟು ಕನ್ನಡ ಅಕ್ಷರ. ತೊಡೆಯಮೇಲಿರಿಸಿಕೊಂಡು ಬರೆದದ್ದರಿಂದ ಕೊಂಚ ಸೊಟ್ಟು. ಆದರೂ, ಕನ್ನಡ. ಅವರ ಹಿಂದೆಯೇ ಅವರ ಕಿಂಕರನಾಗಿ ವರ್ತಿಸಲು ಕಾತುರನಾಗಿ ಓಡಾಡುತ್ತಿದ್ದ ಕಿಂಪುರುಷ ಕಾರ್ಯದರ್ಶಿಯ ಕೈಗೆ ಅದನ್ನು ಕೊಟ್ಟರು. ಆತ ಕತ್ತು ಕೊಂಕಿಸಿ ಕೈನೀಡಿ ಸ್ವೀಕರಿಸಿ ವೇದಿಕೆಯ ಎಡ ಮಗ್ಗುಲಲ್ಲಿದ್ದ ಹಂತಗಳ ಮೂಲಕ ಸದ್ದುಮಾಡದೆ ಹತ್ತಿದ. ಪುರಭವನದಲ್ಲಿ ಕಿಕ್ಕಿರಿದಿದ್ದ ಮಹಾಶಯರೆಲ್ಲರೂ ಗಾಯಕರನ್ನು ನೋಡಿ ಹಲ್ಕಿರಿಯುತ್ತಿದ್ದರು. ಗಾಯಕರ ರಾಗಾಲಾಪನ ಚತುರತೆ ಅವರ ಸಂಗೀತ ಶಾಸ್ತ್ರ ನಿಪುಣತೆ ಅವರ ಕಂಠದ ಇಂಪು ಇತ್ಯಾದಿಗಳೆಲ್ಲವನ್ನೂ ಐದು ನಿಮಿಷಗಳ ಹಿಂದಿನ ಚಪ್ಪಾಳೆಯಿಂದಲೂ ಅದರ ಮಾರುಲಿಯಿಂದಲೂ ಊಹಿಸಬಹುದಾಗಿತ್ತು. ಒಳಗೆ ಬರಲಾಗದೆ ಹೊರವಲಯದಲ್ಲಿದ್ದ ಸಭಿಕ ಮಹಾಶಯರೂ ಕೂಡ ಒಳಗಿನ ಗದ್ದಲವನ್ನೇ ಗಾನವೆಂದು ಭಾವಿಸಿ ತಮ್ಮ ಚಪ್ಪಾಳೆಗಳಿಂದಲೂ ಹರ್ಷಧ್ವನಿಯನ್ನು ಇಮ್ಮಡಿಸಿದರು....

ಗಂಡಸರೆಲ್ಲರೂ ಸಾಮಾನ್ಯವಾಗಿ ಬಲಗೈಯನ್ನು ಎಡಗೈಯ್ಯಮೇಲೆ ಬಡಿದು ಚಪ್ಪಾಳೆ ತಟ್ಟುತ್ತಾರೆ. ವಾಮಾಕ್ಷಿಯರಾದರೋ, ಬಲಗೈಯನ್ನು ಬಿಚ್ಚಿಹಿಡಿದು ಎಡಗೈಯಿಂದ ಅದರ ಮೇಲೆ ಬಡಿದು ಚಪ್ಪಾಳೆ ತಟ್ಟುತ್ತಾರೆ. ಇದನ್ನು ನೀವು ಇದುವರೆಗೂ ಗಮನಿಸದೆ ಇರಬಹುದು. ಮುಂದಾದರೂ ಗಮನಿಸಿ. ಗಂಡಸರ ಚಪ್ಪಾಳೆಗೆ ಬಲಗೈ ಸುತ್ತಿಗೆ; ಹೆಂಗಸರಿಗೆ ಎಡಗೈ. ಗಂಡಸರ ಅಡಿಗಲ್ಲು ಎಡಗೈ; ಹೆಂಗಸರದು ಬಲಗೈ. ಒಂದು ವೇಳೆ ಹೀಗಲ್ಲದೆ

ತದ್‌ವಿಪರೀತವಾಗಿ ಯಾರಾದರೂ ವರ್ತಿಸಿದರೂ ಅದು ಆಯಾ ವ್ಯಕ್ತಿಗಳ ನಿಜಸ್ವರೂಪದ ಆಂತರಿಕ ಕುರುಹು....ಹಂತ ಹತ್ತಿ ಹೋಗುತ್ತಿದ್ದ ಕಿಂಪುರು ಷನ ಕೈಯಲ್ಲಿನ ಕಾರ್ಡನ್ನೇ ಎಲ್ಲರೂ ಬಿಟ್ಟಕಣ್ಣಿಂದ ಅವಲೋಕಿಸುತ್ತಿದ್ದರು. ಹರಕು ಜಮಖಾನೆಯ ತುಂಡೊಂದು ಆತನ ಚಪ್ಪಲಿಗೆ ತಗುಲಿ ಅವರ ಗಮ ನವನ್ನು ಅಲ್ಪ ತಡೆದಾಗ ಇಡಿಯ ಸಭೆಯ ಎದೆಯಿಂದ ಓ ಎಂಬ ಒಂದು ಸುಯ್ಲು ಎದಿತು. ಸದ್ಯಕ್ಕೆ ಕಾರ್ಯದರ್ಶಿ ಅರೆಮುಗ್ಗರಿಸಿ ಮುಂದುವರಿದ. ತಂಬೂರಿ ಬಾರಿಸುತ್ತಿದ್ದ ತುಂಬುರು ಕೈಯಲ್ಲಿ ಚೀಟಿಯನ್ನು ಕೊಟ್ಟು ಆತ ಅಲ್ಲೇ ಕುಳಿತುಕೊಂಡನು. ಗಾಯಕರು ಮುಂದೆ ಹಾಡಬೇಕಾದ ಹಾಡನ್ನು ರಾವ್‌ಬಹದ್ದೂರ್‌ರವರೇ ಚುನಾಯಿಸಿ ಸೂಚಿಸಿದಾರೆ ಎಂದು ಸಭಿಕರೆಲ್ಲರೂ ಊಹಿಸಿದರು.

ತಂಬೂರಿ ವಿದ್ವಾಂಸನಿಗೆ ಓದು ಬರದು. ಆದರೂ ಅವನು ಅದನ್ನು ನೋಡಿ ಓದು ನಟಿಸಿ ಮೃದಂಗದವನ ಬೆನ್ನು ಕೆರೆದು ಅವನ ಮಡಿಲಲ್ಲಿಟ್ಟ. ಅವನು ಅದನ್ನ ಓದಿಕೊಂಡು ತನಗೆ ತಾನೇ ನಕ್ಕಾಗ ಸಭಿಕರಿಗೆ ತುಂಬಾ ರೇಗಿತು. "ಹಾಳು ಜನ! ಆ ಚೀಟಿಯನ್ನ ಬೇಗ ಸಂಗೀತಕಾರರ ಕೈಗೆ ಕೊಡಬಾರದೇ? ರಾವ್‌ಬಹದ್ದೂರ್‌ರವರಿಗೆ ಬೇಕಾದ ಹಾಡು ಸಭಿಕರಿಗೂ ರುಚಿಸುತ್ತದೆ. ಗಾನಲಹರಿಯ ಪ್ರವಾಹಕ್ಕೆ ಏಕಿಷ್ಟು ತಡ?" ಎಂದು ಅವರು ಕಣ್ಣುರುಳಿಸಿದರು. ಮೃದಂಗದವನಿಂದ ಚೀಟಿ ಶಿಷ್ಯನ ಮೂಲಕ ಸರಿಯಾದ ವಿಳಾಸವನ್ನು ತಲಪಿತು. ಗಾಯಕರು ಶಿಷ್ಯನ ಕಡೆ ದುರು ಗುಟ್ಟಿದರು.

ಆಗ, ಸಭಿಕರಿಗೂ ಕುತೂಹಲ ಹೆಚ್ಚಿತು. ಎಲ್ಲರ ಕತ್ತುಗಳೂ ಮುಂದೆ ಬಾಗಿ ಶಿರಗಳನ್ನು ಚಾಚಿ ಹಿಡಿದುವು. ಗಾಯಕರ ಮುಖಭಾವವನ್ನೇ ಎಲ್ಲರೂ ಪಠಿಸಿದರು.

ಏಕೆಂದರೆ, ಅವರ ಮೊದಲನೆಯ ಹಾಡಾದ "ವಾತಾಪಿ" ಎಂಬ ಗಣಪತಿ ಸ್ತುತಿಯನ್ನು ಆಗಲೇ ಮತ್ತೊಂದು ಸಾರಿ ರಾವ್‌ಬಹದ್ದೂರ್ ರವರು ಚೀಟಿ ಕಳುಹಿಸಿ ಹಾಡಿಸಿದ್ದರು. ಈಗ ಅದೇ ಮಹಾನುಭಾವರು ಅದೇ ಕಾರ್ಯದರ್ಶಿಯ ಮೂಲಕ ಅಂಥದ್ದೇ ಕಾರ್ಡೊಂದನ್ನು ಕಳುಹಿಸಿ ದಾಗ ಸಭಿಕರು ಉಂಗುಷ್ಠದ ಮೇಲೆ ಎದ್ದು ನಿಂತದ್ದು ಏನಾಶ್ಚರ್ಯ?

" ಹಾಡಿದ್ದನ್ನೇ ಹಾಡಿಸುವ ಕಿಸೆ ತುಂಬಿದ ಕಾಸಯ್ಯ ! " ಎಂಬ ಹಾಗೆ ರಾವ್‌ಬಹದ್ದೂರ್‌ರವರ ವಿಚಿತ್ರ ನಡತೆಯನ್ನು ಅವರೆಲ್ಲರೂ ಅವಲೋಕಿಸುತ್ತಿದ್ದರು.

ಗಾಯಕರು ಚೀಟಿಯನ್ನು ಓದಿ ಶಿಷ್ಯನನ್ನು ದುರುಗುಟ್ಟಿದರು. ಮೃದಂಗದವನನ್ನು ನೋಡಿದರು. ಆತ ' ನನಗೇನು ಗೊತ್ತು ? ' ಎಂದು ಸನ್ನೆ ಮಾಡಿದ. ಪಿಟೀಲಿನವನ ಕಡೆ ದೃಷ್ಟಿ ತಿರುಗಿಸಿದರು. ಆತ ' ನಮ್ಮ ಹಣೇಬರಹ ' ಎಂದು ಸನ್ನೆ ಮಾಡಿದ. ವೇದಿಕೆಯ ಮೇಲಿದ್ದವರೆಲ್ಲರೂ ಕಾರ್ಯದರ್ಶಿಯ ಕಡೆ ನೋಡಿದರು. ಆತ ರಾವ್‌ಬಹದ್ದೂರ್ ಕಡೆ ಬೆರಳು ತೋರಿಸಿದ.

ಗಾಯಕರು ಆಕಳಿಸಿದರು. ಬಾಯೆದುರು ಚಿಟಿಕೆ ಹೊಡೆದರು. ಅವರು ಕಂಠ ಸರಿಪಡಿಸಿದರು. ಮೃದಂಗದವನು ಜುಟ್ಟನ್ನು ಗಂಟಿಸಿದ. ರಾವ್ ಬಹದ್ದೂರ್ ದಂಪತಿಗಳು ಪಿಸುಗುಟ್ಟು ನಿಲ್ಲಿಸಿ ಹಾಡನ್ನು ಕೇಳಲು ಸಿದ್ಧರಾದರು.

" ವಾ....ಅ....ಅ...ಅ....ತಾ....ಅ....ಅ....ಪಿ "

ಸಭಿಕರಲ್ಲಿ ಬಹು ಭಾಗದವರು ಕಕ್ಕಾವಾದರು; ಉಳಿದವರು ಬಿಕ್ಕಿಯಾದರು. ಮಹಿಳೆಯರು ಕಿಲಕಿಲನೆ ಪಿಸುಗುಸಿದರು. ಕೋಪಸೂಚಕವಾದ ಕೆಲವು ಶಬ್ದವಿಶೇಷಗಳು ಎಲ್ಲಿಂದಲೋ ಕೇಳಿ ಬಂದುವು....ಮೂರನೆಯ ವಾತಾಪಿ ಮುಗಿಯಿತು. ಕೂಡಲೇ ರಾವ್‌ಬಹದ್ದೂರ್‌ರವರು ಎದ್ದರು. ಅವರೊಂದಿಗೆ ಅವರ ಪತ್ನಿಯೂ ಸಹಗಮನ ಮಾಡಿದಳು.

ಅವರಿಬ್ಬರೂ ಬಾಗಿಲನ್ನು ಸಮೀಪಿಸಿದಾಗ ಯಾರೋ ಒಬ್ಬರು, " ವಾತಾಪಿ ಜೀರ್ಣೋಭವ " ಅಂದರು. ಸಭೆಯ ಕೆಟ್ಟಹಾಸದ ನಡುವೆ ರಾವ್‌ಬಹದ್ದೂರ್‌ರವರ ಓವಲ್‌ಕಾರು ಶಪಿಸುತ್ತಾ ಹೊರಟೇ ಹೋಯಿತು.

* * * *

ಮುಟ್ಟಿದ್ದಕ್ಕೆ ಮೂರು ಸಾರಿ, ಎಂಬ ಹಾಗೆ ಒಂದೇ ಹಾಡನ್ನೇ ಹೀಗೆ ಮತ್ತೆ ಮತ್ತೆ ಹೇಳಿಸಿ ಕೂಡಲೇ ಕಂಬಿ ಕಿತ್ತ ಆ ಮಹರಾಯನ ಉದ್ದೇಶವೇನಿರಬಹುದೆಂದು ನಾವು ಚರ್ಚೆ ಮಾಡಬೇಕಾಗಿಯೇ ಇಲ್ಲ.

ಅವರ ಡ್ರೈವರನ್ನ ಕೇಳಿದರೆ ಸಾಕು. ದಂಪತಿಗಳಿಬ್ಬರೂ ಹಿಂದಿನ ಸೀಟಿನಲ್ಲಿ ಕುಳಿತು, ಒಬ್ಬರಿಗೊಬ್ಬರು ಪಕ್ಕ ಚುಚ್ಚಿ ನಕ್ಕರಂತೆ; ಉದ್ದೇಶ ಏನು ಅಂತ ಆಗ ಆತನಿಗೆ ಗೊತ್ತಾಯಿತಂತೆ.

"ಹತ್ತೆಣಿಸುವುದರೊಳಗಾಗಿ ಆ ಮೃದಂಗದವನ ಜುಟ್ಟು ಬಿಚ್ಚಿ ಹೋಗುತ್ತೆ ಅಂತ ನಾನು ಹೇಳಲಿಲ್ಲವೆ. ಹಾಗೆಯೇ ಆಯಿತು, ಅಂದ್ರೆ!"

"ಆದರೆ, ಎರಡನೆಯ ಸಲ ಹಾಡಿದಾಗ ಹನ್ನೆರಡಕ್ಕೆ ಬಿಚ್ಚಿ ಹೋದದ್ದು....!"

"ಅದು ಲೆಕ್ಕಕ್ಕಲ್ಲ! ಆತ ತುಂಬಾ ಬಿಗಿಯಾಗಿ ಕಟ್ಟಿದ್ದ. ಅದಕ್ಕೇ ತಾನೆ ಇಬ್ಬರೂ ಒಪ್ಪಿ ಇನ್ನೊಂದು ಸಾರಿ ಹಾಡಿಸಿದ್ದು....ಮೂರನೆಯ ಸಾರಿ 'ಒಂಬತ್ತು' ಅಂದಾಗ ಬಿಚ್ಚಿತು."

"ನೀನು ಬೇಗ ಬೇಗ ಎಣಿಸಿ ಬಿಟ್ಟೆ"

"ಎರಡನೆಯ ಸಲ....ನೀವು....ಐದು ಆರು....ಅಂತ ಎರಡೆರಡು ಸಾರಿ ಅಂದದ್ದು....!"

"ಹೋಗಲಿ ಬಿಡು, ನೀನೇ ಗೆದ್ದೆ! ಒಪ್ಪಿದೆ. ಆದರೂ ಪಾಪ, ನಮಗೆ ಬೇಕಾಗಿದ್ದದ್ದು ಮೃದಂಗದವನ ಜುಟ್ಟಾದರೂ ಸಂಗೀತಕಾರ ಅದನ್ನ ಮೂರು ಬಾರಿ ಹಾಡಿದನಲ್ಲಾ ನಮಗಾಗಿ!...."

---

ಲಾಭದಾಸೆಯ ಡೊಂಕು ೨೩

# ನಾಯಿಗಳಿವೆ

ಪೆನ್ಷನ್ ಪಡೆದ 'ಪರ್ಸನಲ್ ಅಸಿಸ್ಟೆಂಟ್ ಟು ದಿ ಕಲೆಕ್ಟರ್' ರವರಿಗೆ ತುಂಬಾ ರೇಗಿತು.

ಏಕೆ? ರೇಗಬಾರದೇನು? ಪೆನ್ಷನ್ ಪಡೆದ ಮೇಲೆ ಪತ್ನೀ ಪುರೋಹಿತರ ಮೇಲಲ್ಲದೆ ಯಾರ ಹತ್ತಿರವೂ ಕೋಪಿಸಿಕೊಳ್ಳಬಾರದೆಂದು ಮನು

ಮಹರ್ಷಿಗಳು ಬರೆದಿಟ್ಟಿದಾರೇನು? ಅದೂ ಅಲ್ಲದೆ, ಅವರು ರೇಗಿದ್ದು ಒಬ್ಬರು ವಿಮಾ ಏಜಂಟರ ಮೇಲೆ. ಅಂದಮೇಲೆ, ತಪ್ಪೇನು? ಸನ್ ಸಾವಿರದ ಎಂಟರಲ್ಲಿ ಸೆಕ್ರಟೇರಿಯಟ್‌ಗೆ ಸೇರಿದಾಗ ಪ್ರಾರಂಭವಾದ ವಿಮಾ ಏಜಂಟರುಗಳ ಧಾಂದಲೆ ಇಲಾಖೆಯಿಂದ ಇಲಾಖೆಗೆ ತನ್ನನ್ನನುಸರಿಸಿ ವರ್ಗವಾಗಿ ಹೋದ ಕಡೆಗಳಲ್ಲೆಲ್ಲ ತನ್ನನ್ನು ಹಿಂಬಾಲಿಸಿ, ಈಗ "ಕರ್ಮ ರಹಸ್ಯ" ವನ್ನೋದುತ್ತಾ ಈಸಿ ಚೇರ್ ಮೇಲೆ ಮಲಗಿರುವಾಗಲೂ ಪೀಡಿಸಿತು ಎಂದರೆ, ರೇಗೋದು ಬಿಟ್ಟು ಖೂಸಿಗೆ ಕೈ ಹಚ್ಚಿದರೂ ನೀವು ಸೈ ಅನ್ನುವಿರಿ! ಈಚೆಗೆ ಉಪ್ಪು ಹುಳಿ ಖಾರ ಅಷ್ಟು ಸೇರದೆ ಇದ್ದರೂ ಹಿಂದೆ ಕಂಠಪೂರ್ತ ತಿಂದ ಮೈ ಅಲ್ಲವೆ? ಅವರು ಎದ್ದು ನಿಂತರು. ಮುಷ್ಟಿ ಬಿಗಿದರು. "ತೊಲಗಾಚೆ" ಎಂದು ಗರ್ಜಿಸುವುದಕ್ಕಾಗಿ ಗಂಟಲು ಸರಿಪಡಿಸಿಕೊಂಡರು. ಆದರೆ, ಬಾಯಿಂದ ಹೊರಗೆ ಬಂದ ದನಿ, "ದಯವಿಟ್ಟು ಹೋಗಿ ಬನ್ನಿ ಅಪ್ಪ" ಎಂಬ ವಿನಯಪೂರಿತ ಬೇಡಿಕೆಯಾಗಿತ್ತು.

ಅವರ ಬೇಡಿಕೆಗೆ ಗೋವಿಂದಯ್ಯನವರು ಬಗ್ಗಲಿಲ್ಲ. "ಹಾಗಲ್ಲ, ಸ್ವಾಮಿ! ತಾವು ಇನ್‌ಷೂರ್ ಮಾಡಿದರೆ ಮಾಡಿ, ಬಿಟ್ಟರೆ ಬಿಡಿ, ನಾನು ಆ ವಿಷಯವನ್ನು ಅಷ್ಟು ಒತ್ತಿ ಹೇಳೋದಿಲ್ಲ. 'ಗೀತಾ ಇನ್ಷೂರೆನ್ಸ್' ಎಂಬ ಒಂದು ಕಂಪನಿ ಇದೆ. ಎಂದಾದರೂ ತಮ್ಮಂತಹ ಗೀತಾಭಿಮಾನಿಗಳು ತಿಳಿದರೆ ಸಾಕು, ನನಗೆ. ತಾವು ಹೇಳಿದ ಹಾಗೆ ತಮಗೂ ವಯಸ್ಸಾಯಿತು, ನನಗೂ ಸಮಯವಿಲ್ಲ. ತಮ್ಮ ಮಕ್ಕಳಿಗೆ ಕಾಸುಳಿಸಿ ಹೋದರೆ ಅವರು ಪೋಲು ಮಾಡಿ ಪೋಕರಿಗಳಾಗುತ್ತಾರೆ ಎಂಬುದು ನನಗೇನು ಗೊತ್ತು?....ತಾವು ಈಗ ಈ ಹಣಪ್ರಪಂಚವನ್ನು ಒತ್ತಟ್ಟಿಗಿಟ್ಟು ರಾಮ ಕೃಷ್ಣ ಎಂದು ಅತ್ತಕಡೆ ಗಮನ ಕೊಡುವ ಕಾಲ....ತಿಳಿಯಿತು....ಕ್ಷಮಿಸಿ.... ತಮ್ಮ ಕಣ್ಣೆದುರಿಗೆ, ಇದೇ ಕಪಾಟದಲ್ಲಿ ಒಂದು ಸೆಟ್ಟು ಉಪನಿಷತ್ತುಗಳು, ೧೦೮ ಸಂಪುಟಗಳು, ಟೀಕಾ ಸಹಿತ, ಅಂದವಾದ ಬೈಂಡು, ಕೃಷ್ಣಾಜಿನ,.... ಸಾಲಾಗಿ ತಮ್ಮ ಕಣ್ಣಿಗೆ ಬಿದ್ದರೆ ತಮ್ಮ ಪರೋಗಮನಕ್ಕೆ ಅನುಕೂಲವಲ್ಲವೆ ಅಂತ ಯೋಚಿಸಿ....ನನ್ನ ಸೂಚನೆ, ಅಷ್ಟೆ. ೫೪ ರೂಪಾಯಿ....೪ ರೂಪಾಯಿ ನನಗೆ. ೫೦ ರೂಪಾಯಿ ಪುಸ್ತಕಗಳು ತಮಗೆ....ಕೂತುಕೊಂಡು ನಿಧಾನವಾಗಿ ಯೋಚನೆ ಮಾಡಿ, ಸ್ವಾಮಿ....ಮುಂಡಕ ಮಾಂಡೂಕ್ಯ ಕಂಠಕ ಕಾಂಠೂಕ್ಯ....ಕೃಷ್ಣಾಜಿನ...."

" ಅಯ್ಯೋ ! ಬೇಡಿ, ಅಪ್ಪ ! ನನಗೆ ಯಾವುದೂ ಬೇಡ. ನಿಮ್ಮ ಪುಸ್ತಕದ ಬೈಂಡ್ ನೋಡುತ್ತಾ ಕುಳಿತರೆ ನನಗೆ ಪಾಪ ವಿಮೋಚನೆ ಆಗುತ್ತದೆಯೇ? ಅದಕ್ಕೆ ಬೇಕು ದೇವರ ಪ್ರಸಾದ...." ಅಂದರು. " ರಿಟೈರ್ಡ್ ....ಮುಂತಾದವರು "

" ಹಾಗನ್ನಿ, ಸ್ವಾಮಿ. ಒಪ್ಪಿದೆ. ತಮ್ಮಷ್ಟು ಪಾಪರಾಶಿ ಗಳಿಸಿಲ್ಲದೆ ಹೋದರೂ, ನನಗೂನೂ....ಹ....ಹ್ಹ....ಹ್ಹ...ಅಲ್ಲಿ ಇಲ್ಲಿ ಸಂಪಾದನೆ ಹ್ಹಿ....ಹ್ಹಿ....ಆಗಿದೆ. ಹೇಳುತ್ತೇನೆ, ಕೇಳಿ, ಸ್ವಾಮಿ....ತಮ್ಮ ಈಗಿನ ಸ್ಥಿತಿಯಲ್ಲಿ ನಾನು ಏನು ಹೇಳಿದರೂ ಕೇಳುತ್ತೀರಿ....ಉಪನಿಷತ್ತುಗಳ ಬೆನ್ನು ನೋಡುತ್ತಾ ನಿಟ್ಟುಸಿರು ಬಿಟ್ಟರೆ ಯಾವ ಸುಡುಗಾಡೂ ತಪ್ಪುವುದಿಲ್ಲ, ಒಪ್ಪಿದೆ. ಆತನ ಪ್ರಸಾದವೇ ಮುಖ್ಯ....ತಾವು ಒಂದು ಕೆಲಸ ಮಾಡಿ. " ಪ್ರಸಾದ್ ಏಜೆನ್ಸಿ " ಎಂಬ ಒಂದು ಕಂಪನಿ ಇದೆ. ಅದಕ್ಕೂ ನಾನೇ ಏಜಂಟು. ತಿಂಗಳಿಗೆ ಮೂವತ್ತು ರೂಪಾಯಿ ಎಸೆದು ಬಿಡಿ....ದಿನವೂ.... ರಾಯರೇ !....ದಿನವೂ, ತಮ್ಮ ಮನೆ ಬಾಗಿಲಿಗೆ, ಟಪಾಲುಮೂಲಕ, ಒಂದೊಂದು ದಿನ ಒಂದೊಂದು ಪುಣ್ಯಕ್ಷೇತ್ರದಿಂದ, ಪೊಟ್ಟಣಗಳು ಬರುತ್ತವೆ, ತಿರುಪತಿ ಉಡುಪಿ ಕಾಶಿ ಪಂಢರಾಪುರ ದ್ವಾರಕಾ ಜಗನ್ನಾಥ ಬದರಿ ಬೇಲೂರು ಸುಬ್ರಹ್ಮಣ್ಯ ಇತ್ಯಾದಿ....ನಿಮಗೆ ಯಾವುದು ಪುಣ್ಯವೋ ಆ ಕ್ಷೇತ್ರದಿಂದಲೂ ಪ್ರಸಾದ ತರಿಸಿ ಕೊಡುತ್ತಾರೆ. ಬೇಡ! ಅಷ್ಟು ಖರ್ಚು ಸಾಧ್ಯವಿಲ್ಲ ಅಂದರೆ, ತಿಂಗಳಿಗೆ ಕೇವಲ ಹತ್ತು ರೂಪಾಯಿ ಕೊಡಿ, ದಿನವೂ ನಮ್ಮ ಕಂಪನಿ ಪುರೋಹಿತರು ಬಂದು, ತಾವು ಮಲಗಿದ್ದ ಹಾಗೆಯೇ ' ಆ ' ಅನ್ನಿ ಸಾಕು, ಬಾಯಿಗೆ ಒಂದು ಉದ್ಧರಣಿ ಗಂಗಾ ಮಾತೆ, ಒಂದು ಚಮಚ ಧನುಷ್ಕೋಟಿ ಮರಳು ಉಡುಪಿ ಹತ್ತಿರದ ಸಮುದ್ರದ ನೀರು ಒಂದು ತೊಟ್ಟು ಹಾಕಿ ಹೋಗುತ್ತಾರೆ. ನಿಮ್ಮ ತನುಮನ ಪಾವನವಾಗುತ್ತದೆ. ಗಂಗೋದಕ ಕ್ರಿಮಿ ವಿನಾಶಕ; ಉಪ್ಪುನೀರು ಜೀರ್ಣಕಾರಿ. "

ಕುರ್ಚಿಯಿಂದ ಅವರು ಏಳಲೇ ಇಲ್ಲ. ಸಮುದ್ರದ ನೀರಿನ ರುಚಿ ನೆನಪಿಗೆ ಬಂತೋ ಏನೋ? ಅವರು ಮೂತಿ ಸೊಟ್ಟು ಮಾಡಿದರು. " ಅಲ್ರಪ್ಪ ! ನಿಮ್ಮನ್ನ ಯಾರು ಬರ ಹೇಳಿದರು ಇಲ್ಲಿಗೆ? ತೆಪ್ಪಗಿದ್ದವನಿಗೆ ಉಪ್ಪುನೀರು ಯಾಕೆ? ನನ್ನ ಹತ್ತಿರ ಹಣವೇ ಇಲ್ಲ. ಮನೆಯಲ್ಲಿ ಮೂರು

ಜನ ಅಳಿಯಂದಿರು. ಒಬ್ಬ ಲಾಯರಾಗಿ ಕಾಲ ಕಳೆಯುತ್ತಿದ್ದಾನೆ. ಒಬ್ಬ ಕ್ರಿಕೆಟ್ ಆಡುತ್ತಿದ್ದಾನೆ...."

"ಹಾಗಾದರೆ ತಾವು ನನ್ನಲ್ಲಿರುವ 'ಕ್ರಿಕೆಟ್ ಕ್ಯೂರ್' ಎಂಬ ಚಿಕಿತ್ಸಾ ಕ್ರಮವನ್ನು ತೆಗೆದುಕೊಂಡು ಓದಿನೋಡೋಣವಾಗಲಿ....ನಿಮ್ಮ ಅಳಿಯನನ್ನ....ಅದರಲ್ಲಿ ಹೇಳಿರುವ ಔಷಧಿಗಳು...."

ಕುರ್ಚಿ ಸದ್ದಾಯಿತು. ಪರ್ಸ್ ಪಡೆದವರು ಪುರುಷಸಿಂಹರಾದರು. ಮುಷ್ಟಿ ಮತ್ತೆ ಬಿಗಿಯಾಯಿತು. "ಹೋಗೋ, ಶನಿ" ಎಂದು ಸಂಪೂರ್ಣ ಅರಚೇ ಬಿಟ್ಟರು!

ಗೋವಿಂದಯ್ಯ ತನ್ನ ಬ್ಯಾಗಿನೊಳಗಿಂದ ಮತ್ತೊಂದು ಪದಾರ್ಥ ವನ್ನು ತೆಗೆದ. "ಸ್ವಾಮಿ! ತಮಗೆ ನನ್ನಂತಹವರ ಮೇಲೆ ಇಷ್ಟು ಬೇಗ ಇಷ್ಟು ಭಯಂಕರ ಕೋಪ ಬರುವುದಾದರೆ, ಇಕೊ, ಈ ಬೋರ್ಡನ್ನು ಕೊಂಡುಕೊಂಡು ಬಾಗಿಲಿಗೆ ಬಡಿಯಿರಿ" ಅಂದ. "ಎಷ್ಟು ಅದಕ್ಕೆ?" ಎಂಬ ಪ್ರಶ್ನೆಗೆ "ಎರಡು ರೂಪಾಯಿ" ಎಂದು ಉತ್ತರ ಹೇಳಿದ.

ಅದೇ ಸಂಜೆ, ಅವರ ಮನೆ ಮುಂದೆ "ನಾಯಿಗಳಿವೆ! ಎಚ್ಚರಿಕೆ!" ಎಂಬ ಬೋರ್ಡಿತ್ತು.

---

**ವೇಷದಾಸೆಯ ಡೊಂಕು** ೨೪

# ಗರುಡಮ್ಮ



ಹುಚ್ಚುರಾಯನಿಗೆ ಹೆಣ್ಣುವೇಷ ಹಾಕಬಾರದಾಗಿತ್ತು ನಾನು. ಏಕೆಂದರೆ, ಅದನ್ನೇ ನೆಪ ಮಾಡಿಕೊಂಡು ಅವನು ನನ್ನನ್ನು ಪ್ರತಿವರ್ಷವೂ ಪೀಡಿಸತೊಡಗಿದ. ಒಂದು ಶಾಲೆ, ಒಂದು ಸಂಘ, ಎಂದರೆ ವಾರ್ಷಿಕೋತ್ಸವ ಗಳನ್ನು ಶ್ರಾದ್ಧದಂತೆ ಶ್ರದ್ಧೆಯಿಂದಲೇ ಮಾಡಬೇಕಾಗುತ್ತದೆ. ಉತ್ಸವ

ವೆಂದರೆ ನಾಟಕವಾಡಲೇಬೇಕೆಂಬುದು ಮೀರಲಾಗದ ಶಾಸ್ತ್ರ. ನೋಡು ವವರಿಗೆ ಕೂಡಲು ಜಾಗ, ಆಡುವವರಿಗೆ ಓಡಿ ಆಡಲು ರಂಗಸ್ಥಳ, ಪರದೆ, ಬಟ್ಟೆಬರೆ, ಬಣ್ಣ, ಇವೊಂದೂ ಇಲ್ಲದಿದ್ದರೂ ನಾಟಕ ಮಾತ್ರ ಆಡಲೇ ಬೇಕಾಗಿದೆ. ಅವರಿವರ ವಿಷಯ ಏಕೆ, ನಾನು ಮಾಡುತ್ತಿರುವುದೂ ಹೀಗೆಯೇ! ನನ್ನದೂ ಒಂದು ಸಂಘ ಇದೆ. ಅಂದರೆ, ನಾನೇ ಅದರ ಸರ್ವಸ್ವವೂ. ಮೂರು ವರ್ಷಗಳ ಹಿಂದೆ 'ಸೋಲಿಗರ ಹುಡುಗಿ' ಎಂಬ ನಾಟಕವನ್ನು ಆಡಿದ್ದೆವು. ತಾವು ಪತ್ರಿಕೆಗಳಲ್ಲಿ ಅದರ ವಿಷಯವನ್ನು ಓದಿರ ಬಹುದು. ಹುಚ್ಚುರಾಯನೇ ಅಂದಿನ ಸೋಲಿಗರ ಹುಡುಗಿ! 'ಯಶಸ್ವಿ ಯಾಗಿ ಅಭಿನಯಿಸಲಾಯಿತು' ಎಂದು ನಮ್ಮೂರು ರಾಮಣ್ಣ ಬಾತ್ಮಿ ಬರೆದು ಕಳುಹಿಸಿದ್ದ.

ಈ ವರ್ಷ 'ಶ್ರೀಮತಿ ಪರಿಣಯ' ತೆಗೆದುಕೊಂಡಿದ್ದೆವು. ಈಗಲೂ ನಮ್ಮೂರಲ್ಲಿ, ಇಂದ್ರ, ನಾರದ ಅಂದರೆ ನಾಕು ಜನ ಸೇರುತ್ತಾರೆ; ಪಟ್ಟಣಿ ಗರ ಹಾಗಲ್ಲ. ಪಾರ್ಟುಗಳನ್ನು ಹಂಚುವ ಕೆಲಸ ನನ್ನದಾಗಿತ್ತು. ಹುಚ್ಚು ರಾಯನ ಚಾಳಿಯಿಂದ ನಾನು ಬದುಕಿಕೊಳ್ಳುವುದಕ್ಕೂ, ಅವನನ್ನು ಬದು ಕಿಸುವುದಕ್ಕೂ ಒಟ್ಟಿನಲ್ಲಿ ನಾಟಕ ಸಾಯದೆ ಉಳಿಯುವುದಕ್ಕೂ ಹುಚ್ಚು ರಾಯ ಊರಿನಲ್ಲಿ ಇಲ್ಲದೇ ಇರುವ ದಿನವನ್ನೇ ನೋಡಿ, ಅಂದು ನಾಟಕಕ್ಕೆ ಸದಸ್ಯರನ್ನು ಕರೆಸಿದ್ದೆ. ಆದರೂ, ಅಭ್ಯಾಸಕ್ಕಾಗಿ ಪಾತ್ರಗಳೆಲ್ಲರೂ ಸೇರುವ ಸ್ಥಳವನ್ನು ಪತ್ತೆ ಮಾಡಿಕೊಂಡು, ಅವನು ದಿನವೂ ಅಲ್ಲಿಗೆ ಬರುತ್ತಿದ್ದ. ನಾಟಕದಲ್ಲಿ ಅಭಿನಯಿಸುವ ಹೆಣ್ಣು ವೇಷಗಳ ವಿಷಯವಾಗಿ, ನನ್ನ ಕಿವಿ ಯಲ್ಲಿ 'ಹಾಗೆ ಬಳುಕಿದರೆ ಸಾಕೆ ಸಾರ್?' 'ಬಣ್ಣ ತುಂಬಾ ಬೇಕಾಗುವು ದಿಲ್ಲವೇ ಸಾರ್?' 'ಇಷ್ಟು ನಿಧಾನವಾಗಿ ಅತ್ತರೆ ಹೇಗೆ ಸಾರ್?' ಎಂದು ದೂರು ಹೇಳುತ್ತಿದ್ದ. ಒಂದು ದಿನ, ಸಂಜೆ, ನನಗೆ ಮಿತಿಮೀರಿದ ಕೋಪ ಬಂತು. ಕಾಫಿ ಬೇರೆ ಕುಡಿದಿರಲಿಲ್ಲ, ಅವನನ್ನು ಜಗುಲಿತನಕ ಎಳೆದು ಕೊಂಡು ಹೋಗಿ, ಅವನೆದುರು ನಿಂತು, 'ಹುಚ್ಚುರಾಯಾ!' ಅಂದೆ. (ಎಂತಹ ಸೊಗಸಾದ ಹೆಸರು!) ಹುಚ್ಚುರಾಯಾ ನೀನು ಸಾವಿರ ಹೇಳಿಕೋ. ಸತ್ತರೂ ನಾನು ನಿನಗೆ ಸೀರೆ ಉಡಿಸುವುದಿಲ್ಲ, ಖಂಡಿತ. ಇವರೆಲ್ಲ ಅಷ್ಟು ಅಯೋಗ್ಯರಾದರೆ ನಾನೇ ಹೆಣ್ಣುವೇಷ ಹಾಕಿಕೊಳ್ಳು

ತ್ತೀನೆ, ತಿಳಿಯಿತೋ? ನಾಟಕ ಬೆಂಕಿ ಬಿದ್ದು ಹೋಗಲಿ!' ಎಂದು ಗರ್ಜಿಸಿದೆ.

ಹುಡುಗ ಪೆಚ್ಚಾದ! ಆ ಮಂಗಳಾರತಿಯ ಹೊಗೆಯಿಂದ ಅವನ ಮುಖ ಕಪ್ಪಾಯಿತು; ಕುಸಿದು ಕುಕ್ಕರಿಸಿದ. ಅಳುವುದೊಂದುಳಿದಿತ್ತು.

ವಾರ್ಷಿಕೋತ್ಸವದ ದಿನ ಬಂತು. ಸಂಜೆ ಆರೂವರೆ ಗಂಟೆ ಹೊತ್ತಿಗೆ ನಾವೆಲ್ಲರೂ 'ಹಸುರು ಕೋಣೆ' ಅಂತಾರಲ್ಲಾ, ಆ ಬಣ್ಣದ ಕೋಣೆ ಯೊಳಗೆ ಸೇರಿ ಬಾಗಿಲು ಹಾಕಿಕೊಂಡೆವು. ಒಳಗೆ ಗದ್ದಲವೋ ಗದ್ದಲ. ಹೋಟಲಿನ ಪಿಂಗಾಣಿ ಕಪ್ಪುಗಳ ಕಣಿಕಣಿ ನಿನದ; ಬಣ್ಣ ಬಳಿಯುವವರ ಆರ್ಭಟ; ಪಾರ್ಟು ಉರು ಹೊಡೆಯುವವರ ಅವಾಂತರ; ನಡುನಡುವೆ 'ಗಲಾಟೆ ಮಾಡಬೇಡಿರೋ!' ಎಂಬ ನನ್ನ ಗಲಾಟೆ! ಒಂದು ಸಲ ಬಾಗಿಲು ತೆಗೆದು ನಾನು ಹೊರಕ್ಕೆ ಕಾಲಿಟ್ಟಾಗ, ಹುಚ್ಚುರಾಯ, ಪಾಪ, ಅಲ್ಲೇ ಹೊರಗೆ ತಲೆ ತಗ್ಗಿಸಿಕೊಂಡು ಕಾಲಿನ ಹೆಬ್ಬೆಟ್ಟಿನಿಂದ ನೆಲ ಕೆರೆ ಯುತ್ತಾ ನಿಂತಿದ್ದ! ಅಲ್ಲಿಂದ ಹೋಗೆನ್ನಲು ಮನಬರದೆ, ಅವನನ್ನು ಒಳಗೆ ಬರಮಾಡಿಕೊಂಡು ಒಂದು ಬಟ್ಟಲು ಕಾಫಿ ಕುಡಿಸಿದೆ. ಅಂತು ಇಂತು ನಾರದ, ದುರ್ವಾಸ, ಅಂಬರೀಷ, ಇಂದ್ರ, ಶ್ರೀಮತಿ, ಎಲ್ಲರೂ ಸಾಲಾಗಿ ಗೋಡೆ ಮಗ್ಗುಲಲ್ಲಿ ಕುಳಿತರು. ಎಂಟು ಗಂಟೆಗೆ ಏಳಬೇಕಾಗಿದ್ದ ಪರದೆ, ಅನುಮಾನಿಸುತ್ತಾ, ತೂಕಡಿಸುತ್ತಾ, ಸಭಿಕರ ಕೂಗಾಟದ ನಡುವೆ, ಎಂಟೂ ವರೆಗೆ ಮೇಲೇರಿತು. 'ಇನ್ನೇನಯ್ಯಾ, ಬಿಡು, ದೇವರಿದಾನೆ' ಎಂದು ಗುಂಡ ನನ್ನ ಬೆನ್ನು ಗುದ್ದಿದ.

ನಾನು ನಿರೀಕ್ಷಿಸಿದ ಕಡೆಗಳಲ್ಲಲ್ಲದಿದ್ದರೂ ಸಭಿಕರು ಆಗಾಗ ನಕ್ಕರು! ಜನರು ಗುಂಪಾಗಿ ಹೊರಗೆ ಹೋಗಲಿಲ್ಲ, ಒಬ್ಬಿಬ್ಬರಾಗಿ ಹೊರಟರು ಅಷ್ಟೆ! ಪಾರ್ಟುಗಳು ಮರೆತು ಹೋದಾಗ, ನಟರು ಸ್ವಂತವಾಗಿ ಆಶುಭಾಷಣ ಮಾಡಿದ್ದು ತುಂಬಾ ಸ್ವಾರಸ್ಯವಾಗಿತ್ತು. ಹಾಡುಗಳಲ್ಲಿ ಅನೇಕ ರಾಗ ಮಾಲಿಕೆಗಳಾಗಿ ಕೊನೆಗಂಡುವು. ಮುಂದಿನ ಸಾಲಿನಲ್ಲೇ ಕುಳಿತಿದ್ದ ಅಮ ಲ್ದಾರರು ಪರದೆ ಎದ್ದಾಗ 'ಅಯ್ಯೋ' ಎಂತಲೂ, ಬಿದ್ದಾಗ, 'ಉಸ್ಸಪ್ಪಾ' ಎಂತಲೂ ತಮಗೆ ತಾವೇ ಹೇಳಿಕೊಳ್ಳುತ್ತಿದ್ದದ್ದು ಪಕ್ಕದ ಪರದೆಯ ಹಿಂದೆಯೇ ನಿಂತಿದ್ದ ನನಗೆ ತಿಳಿಯಿತು. ವಿದ್ಯಾವಂತರಾದ ಅವರ ಮನ ಸ್ಸಿನ ಮೇಲೆ ಹುಡುಗರ ಅಭಿನಯವು ಅಷ್ಟರಮಟ್ಟಿಗಾದರೂ ಪರಿಣಾಮ

ಕಾರಿ ಆಯಿತಲ್ಲಾ, ಎಂದು ನಾನು ಹಿಗ್ಗಿದೆ; ಹಿಗ್ಗಿನಲ್ಲಿ ಗುಂಡ ತಂದುಕೊಟ್ಟ ಕಾಫಿಯನ್ನೂ ಕೂಡ 'ಬೇಡ' ಎಂದು ಬಿಟ್ಟೆ!

ಕಡೆಯ ದೃಶ್ಯವೂ ಬಂತು. 'ಶ್ರೀಮನ್ನಾರಾಯಣ'ನು ಪರದೆ ಹಿಂದಿನಿಂದ ಪಟಾಸಿನ ಆಸ್ಫೋಟನವಾದೊಡನೆಯೇ ಹೊರಗಾಣಿಸಬೇಕಾದ ಮಹಾ ಸನ್ನಿವೇಶ! ಆಗಿನ ನನ್ನ ಕಳವಳವನ್ನು ತಾವೇ ಊಹಿಸಕೊಳ್ಳಬಹುದು. ಪಟಾಸು ಚೆನ್ನಾಗಿತ್ತು. ದೇವರು ಪ್ರತ್ಯಕ್ಷವಾದಾಗ ನಾನು ಪರದೆಯೊಳಗಿನ ತೂತಿನಿಂದ, ಸಭಿಕರನ್ನೇ ನೋಡುತ್ತಿದ್ದೆ. ಅವರಲ್ಲಿ ಹೆಚ್ಚಾಗಿ ಭಕ್ತಿರಸವು ಉಕ್ಕಿಬಂದಂತೆ ತೋರಲಿಲ್ಲ. 'ಕಲಿಯುಗದ ಮಹಿಮೆ' ಎಂದುಕೊಂಡೆ.

ಆಗ ಪರದೆ ಬಿತ್ತು....ನಾಟಕ ಮುಗಿಯಿತು.... 'ಪರಮಾತ್ಮಾ! ನಿನ್ನ ಕೃಪೆ' ಎಂದು ಹೇಳುತ್ತಾ, ನಾನು ಬಣ್ಣದ ಕೋಣೆಯ ಕಡೆಗೆ ಹೊರಟೆ.

ದಾರಿಯಲ್ಲೇ ಅಮಲ್ದಾರರು ಸಿಕ್ಕರು; ಅವರು ರಂಗಸ್ಥಳಕ್ಕೆ ಹತ್ತಿ ಬಂದುದನ್ನು ನಾನು ನೋಡಲಿಲ್ಲ. ಅವರು, "ನೀವೇನೂ ಯೋಚನೆ ಮಾಡಬೇಡಿ! ಹುಡುಗರು, ಪಾಪ, ಇದಕ್ಕಿಂತ ಚೆನ್ನಾಗಿ ಹೇಗೆ ತಾನೇ ಆಡಿಯಾರು? ಕಡೆಯ ಸೀನೊಂದು ಚೆನ್ನಾಗಿ ಬಂತಲ್ಲಾ ಇನ್ನೇನು? ಸದ್ಯಃ ಪಟಾಸಿನ ಶಬ್ದದಿಂದ ನಿದ್ದೆ ಮಾಡುತ್ತಿದ್ದವರೆಲ್ಲರೂ ಎದ್ದರು! ಆ ಗರುಡನಂತೂ...." ಅಂದರು. "ಏನು?....ಗರುಡ?...ಯಾವ ಗರುಡ?" ಎಂದು ಕೇಳುತ್ತಾ ನಾನು ಅಮಲ್ದಾರರೊಂದಿಗೆ, ಹಸುರು ಕೋಣೆಗೆ ಹೋಗಿ, ಹುಡುಗರ ನಡುವೆ ಕುಳಿತುಕೊಂಡೆ. "ದೇವರ-ಪಕ್ಕದಲ್ಲೇ ನಿಂತಿದ್ದನಲ್ಲ, ಗರುಡ?" ಎಂದು ಅಮಲ್ದಾರರು ಹೇಳಿದಾಗ, ನನಗೆ ಏನೂ ಅರ್ಥವಾಗಲಿಲ್ಲ.

ಆಗ, ಹುಡುಗರೆಲ್ಲರೂ ಒಟ್ಟಾಗಿ ನಕ್ಕು ಹುಚ್ಚುರಾಯನನ್ನು ಮುಂದಕ್ಕೆ ನೂಕಿದರು. ಹುಚ್ಚುರಾಯ....ಹೆಣ್ಣು ವೇಷ ಹಾಕಿದ್ದ!!

"ಏನೋ ಇದು?" ಎಂದು ಗದರಿಸಿದೆ. ಅದಕ್ಕವನು, "ನೀವು ಇರಲಿಲ್ಲ ಸಾರ್ ಇಲ್ಲಿ, ಕ್ಷಮಿಸಬೇಕು ಸಾರ್. ನಾರಾಯಣನ ಪಕ್ಕದಲ್ಲಿ ಲಕ್ಷ್ಮಿಯೂ ನಿಂತರೆ ಚೆನ್ನಾಗಿರುತ್ತದೆ ಅಂತ ತೋರಿತು, ಸಾರ್! ಹೆಣ್ಣು ವೇಷ ಹಾಕಿಕೊಳ್ಳುವ ಚಪಲ, ಸಾರ್! ಇನ್ನುಮೇಲೆ ಹಾಕೋದಿಲ್ಲ,

ಸಾರ್! ಸೀರೆ ಉಟ್ಕೊಂಡು, ಟೋಫನ್ ಹಾಕ್ಕೊಂಡು 'ಲಕ್ಷ್ಮೀ' ಅಂತ ಹೋಗಿ ನಿಂತುಬಿಟ್ಟಿ ಸಾರ್! ಆಯ್ತು ಸಾರ್! ಗರುಡ! ಸಾರ್! ಇನ್ನು ಮೇಲೆ ಸತ್ತರೂ ಸೀರೆ ಉಡೋದಿಲ್ಲ ಸಾರ್!" ಎಂದು ಹೇಳಿ ಗಳಗಳನೆ ಕಣ್ಣೀರು ಬಿಟ್ಟ.

---

ವಾತ್ಸಲ್ಯದ ಡೊಂಕು: ೨೫

# ಎದುರು ಮನೆ ಮಕ್ಕಳು

ಮೊದಮೊದಲು ನನಗೆ ಅರಿವೇ ಆಗಲಿಲ್ಲ. ನನ್ನ ಮಟ್ಟಿಗೆ ನಾನು, ನನ್ನ ರೂಮಿನಲ್ಲಿ ಕಿಟಕಿಯ ಹತ್ತಿರ ಕುಳಿತು ಕಾದಂಬರಿ ಬರೆಯುತ್ತಿದ್ದೆ, ದೇವರಾಜ ಬಹದ್ದೂರ ಧರ್ಮನಿಧಿಗೆ ಕೊಟ್ಟು ಕಳುಹಿಸಿ ಐನೂರು ರೂಪಾಯಿ ಸಂಪಾದಿಸೋಣ ಅಂತ. ೩೦೦ ಪುಟದಷ್ಟು ಕಾದಂಬರಿ ಮುಂಬರಿದಿತ್ತು. ಕಥಾನಾಯಕನ ಕಷ್ಟ ಪರಂಪರೆಗಳು ಪರ್ವತಾಕಾರವಾಗಿ ಅವನ ಎದೆಯ ಮೇಲೆ ಕುಳಿತು ಅವನ ರಕ್ತವನ್ನು ಹಿಂಡಿದ್ದುವು. ಅತಿಸಾರದಿಂದ ನರಳುತ್ತಾ ಅವನು ಭಾವಿಯೊಳಕ್ಕೆ ಧುಮುಕಿದ್ದ; ನಡುದಾರಿಯಲ್ಲಿ ಕೈಗೆ ಸಿಕ್ಕಿದ ಒಂದು ಕಾಡು ಗಿಡವನ್ನು ಹಿಡಿದು ನೇತಾಡುತ್ತಿದ್ದ. 'ಮುಂದಕ್ಕೆ ಅವನನ್ನು ಏನು ಮಾಡಬೇಕು? ಕೆಳಕ್ಕೆ ತಳ್ಳಿ, ಚರಮಶ್ಲೋಕ ಬರೆದು ಬಹುಮಾನ ಪಡೆಯೋಣವೇ? ಅಥವಾ ಅದಷ್ಟು ಅಲ್ಪ ಮಾನವೇ ಸಾಕೆಂದು ಯಾರನ್ನಾದರೂ ಕರೆಸಿ ಮೇಲಕ್ಕೆತ್ತಿ, ಮತ್ತೆ ಮೂರು ಅಧ್ಯಾಯಗಳನ್ನು ಬರೆದು ಡಾಕ್ಟರನ್ನು ಕರೆಸಿ ಶಾಸ್ತ್ರೋಕ್ತವಾಗಿಯೇ ಸಾಯಿಸೋಣವೇ?' ಎಂಬ ಆಂದೋಳನಕ್ಕೆ ಸಿಲುಕಿತ್ತು ನನ್ನ ಮೆದುಳು. ಕಿಟಕಿಯಿಂದಾಚೆಯ ರಸ್ತೆಯ ಮೇಲೆ ತಿರುಗಾಡುವ ಜನರನ್ನು ನೋಡಿದೆ. ನನ್ನ ಕಣ್ಣಿಗೆ ಬೀಳುವ ಮೂರನೆಯ ವ್ಯಕ್ತಿ ಹೆಂಗಸಾಗಿದ್ದರೆ, ಕಥಾನಾಯಕನನ್ನು ಕೆಳಕ್ಕೆ ತಳ್ಳಿ ಬಿಡುವುದು, ಗಂಡಸಾಗಿದ್ದರೆ, ಮೇಲಕ್ಕೆಳೆಸುವುದು ಎಂದು ನಿರ್ಧರಿಸಿದೆ.

ಕಿಟಿಕಿಯ ಹತ್ತಿರ ಹೋಗಿ ನಿಂತೆ. ಮಧ್ಯಾಹ್ನ ಒಂದು ಗಂಟೆ. ಸೂರ್ಯ ತಲೆಯ ಮೇಲೆ ಸರಿಯಾಗಿ ಉರಿಯುತ್ತಿದ್ದಾನೆ. ಒಂದು ಪ್ರಾಣಿಯೂ ಇಲ್ಲ....ಆಕಳಿಸಿದೆ! ನನ್ನ ದೃಷ್ಟಿ ಎದುರು ಮನೆ ಕಿಟಕಿಯ ಮೇಲೆ ಬಿತ್ತು.

ಕಂಬಿಗಳನ್ನು ಹಿಡಿದುಕೊಂಡು, ಬೋನಿಗೆ ಹಾಕಿದ ಕಪಿಗಳಂತೆ ಎರಡು ಮಕ್ಕಳು ಕುಳಿತಿದ್ದುವು. ಮುದ್ದಾದ ಮನುಷ್ಯ ಮರಿಗಳು! ಒಗೆದ ಉಡುಪು! ಬಾಚಿದ ತಲೆ ಕೂದಲು! ಸಿಂಬಳರಹಿತ ಮುಖ! ಅವಳಿಜವಳಿ ಯಂತೆ ಎರಡು, ಎರಡೂವರೆ, ಮೂರು ವರ್ಷದ ಪ್ರಾಯದವು. ನನ್ನನ್ನೇ ದುರುದುರನೆ ದುಂಡುಗಣ್ಣುಗಳನ್ನುರುಳಿಸಿ ನೋಡಿದುವು. ನಾನೂ ದುರು ದುರಿಸಿದೆ.

ಅಂದಿನಿಂದ ಆ ಮಕ್ಕಳ ವಿಷಯವಾದ ನನ್ನ ಕೂತೂಹಲ ಹೆಚ್ಚಿತು. ಅದೇ ಅವರ ಆಟದ ಕೋಣೆ ಅಂತ ಗೊತ್ತುಮಾಡಿದೆ. ಅವರ ಅಜ್ಜಿ ಬೆಳಿಗ್ಗೆ ೭—೩ರ ಹೊತ್ತಿಗೆ ಅವರಿಗೆ ಹಾಲು ತಂದು ಕೊಡುತ್ತಿದ್ದದ್ದು ಆ ರೂಮಿ ಗೇನೇ. ಹುಡುಗಿಗೆ ಬೆಳ್ಳಿ ಗಲಾಸು! ಹುಡುಗನಿಗೆ ಬೆಳ್ಳಿ ಬಟ್ಟಲು! ಕುಡಿದ ಮೇಲೆ ಅವುಗಳನ್ನು ಅವರು ಕಿಟಕಿಯಲ್ಲೇ ಇಡುತ್ತಿದ್ದರು. ೮—೧೫ಕ್ಕೆ ಸರಿಯಾಗಿ ಆಳುಬಂದು ತೆಗೆದುಕೊಂಡು ಹೋಗಿ ತೊಳೆದಿಡುವನು. ಇತ್ತೀ ಚೆಗೆ ಅವರಿಬ್ಬರಿಗೂ 'ಬಾಯಿ ಹಾರ್ಮೋನಿಯಂ'ಗಳನ್ನು ತಂದುಕೊಟ್ಟಿದ್ದಾರೆ. ಅವರಿಬ್ಬರಿಗೂ ರಾಗಿ ಬಿಸ್ಕತ್ತೆಂದರೆ ಆಗದು. ಏಕೆಂದರೆ, ಕಿಟಕಿಯ ಹೊರಕ್ಕೆ ಅದನ್ನ ಅವರು ಆಗಾಗ ಎಸೆಯುತ್ತಿದ್ದರು. ಆ ಕೋಣೆಯೊಳಕ್ಕೆ ಅವರ ತಾಯಿ ಬಂದ ಹಾಗೆ ನನಗೆ ಕಾಣಿಸಲಿಲ್ಲ. ತಬ್ಬಲಿಗಳೋ, ಏನೋ, ಪಾಪ!

ನನಗೂ ಅವರಿಗೂ ದಿನೇ ದಿನೇ ಸ್ನೇಹ ಬೆಳೆಯಿತು. ಒಂದು ದಿನ ನಾನು ನನ್ನ ಕುರ್ಚಿಯಿಂದ ನನ್ನ ಕರವಸ್ತ್ರವನ್ನು ಬೀಸಿದೆ. ಅವರಿಬ್ಬರೂ ಕಿಟಕಿಯಿಂದಿಳಿದು ಬಣ್ಣದ ಬಟ್ಟೆ ತಂದು, ಮತ್ತೆ ಹತ್ತಿ ಕುಳಿತು ಅದನ್ನು ಬೀಸಿ ನಕ್ಕರು. ಅಂದಿನಿಂದ ಆಗಾಗ ನಾನು ಬಿಳಿ ಬಾವುಟ ಬೀಸಿ ಅವರನ್ನು ಆನಂದಗೊಳಿಸುತ್ತಿದ್ದೆ. ನನ್ನ ತಲೆಯನ್ನು ಕಂಡ ಕೂಡಲೆ ಅವರು ಕೈ ಚಪ್ಪಾಳೆ ಹೊಡೆದು ಮನಮೋಹಕವಾಗಿ ನಗುತ್ತಿದ್ದರು. ನಾನು ಮೆಲ್ಲಗೆ ನೆಲದ ಮೇಲೆ ಕೂತು, ಥಟಕ್ಕನೆ ತಲೆ ತೋರಿಸಿ ಅವರು ಮತ್ತಷ್ಟು ನಗು ವಂತೆ ಮಾಡಿದೆ. ಇದ್ದಕ್ಕಿದ್ದಂತೆ ಕೆಳಕ್ಕೆ ಕುಸಿದು ಮಾಯವಾದಾಗಲಂತೂ ಅವರ ಆನಂದಕ್ಕೆ ಪಾರವೇ ಇರಲಿಲ್ಲ.

ಒಂದೆರಡು ದಿನಗಳ ಪರಿಚಯವಾದ ಮೇಲೆ, ಅವರೇ ಮೊದಲು ಬಣ್ಣದ ಬಟ್ಟೆ ಬೀಸುವುದಕ್ಕೆ ಪ್ರಾರಂಭ ಮಾಡಿದರು! ಆಗ ನಾನೂ ನನ್ನ ಬಿಳಿ ಬಾವುಟ ಬೀಸದೆ ಇದ್ದರೆ ಅವರು ಅಳುವುದಕ್ಕೆ ಮೊದಲು ಮಾಡು ವರು. ಆಗ ನನ್ನ ಕರುಳೇ ಕಿತ್ತು ಬರುವ ಹಾಗಾಗುವುದು. ಸರಿ! ನಾನು ಕಾದಂಬರಿ ನಿಲ್ಲಿಸಿ, ಕಿಟಕಿಯ ಹತ್ತಿರ ಕಾದು ಬಾವುಟ ಬೀಸಿ ಮತ್ತೆ ಕುಳಿತುಕೊಳ್ಳುವ ಹೊತ್ತಿಗೆ ಅವರು "ರೀ!" "ರೀ!" ಎಂದು ಕೂಗು ವರು.

ಮತ್ತೊಂದು ದಿನ ಆ ಗಂಡು ಕೂಸು ನನ್ನ ಮುಖಕ್ಕೆ ಗುರಿಯಿಟ್ಟು ಕಲ್ಲು ಹೊಡೆಯುವಂತೆ ಮಾಡಿತು. ಅದು ನನ್ನ ಮೂಗಿನ ತುದಿಗೆ ತಾಕಿ ದಂತೆ ನಟಿಸಿ 'ಗೊಳೋ' ಎಂದು ಅತ್ತೆ. ನನ್ನ ಕಪಟಪ್ರಲಾಪ ಬಲು ಚೆನ್ನಾಗಿತ್ತು ಅಂತ ಕಾಣುತ್ತೆ. ಏಕೆಂದರೆ, ಹುಡುಗರು ಮತ್ತೆ ಮತ್ತೆ ನನ್ನ ಮುಖಕ್ಕೆ ಗುರಿಯಿಟ್ಟು ಕಲ್ಲು ಹೊಡೆದರು. ಕಡೆಗೆ ಒಂದು ಕಲ್ಲು ಬಂದು ನನ್ನ ಕನ್ನಡಕವನ್ನು ಭೇದಿಸಿತು. ಆಗ ನಾನು ಮತ್ತೆ ಕುರ್ಚಿಯಲ್ಲಿ ಕುಳಿತು ಕಾದಂಬರಿಯನ್ನು ಮುಂದುವರಿಸಿದೆ.

ಸ್ವಲ್ಪ ಹೊತ್ತಿನಲ್ಲಿ ನನಗೇ ಬೇಜಾರಾಯಿತು. ಮತ್ತೆ ಕಿಟಕಿಯಲ್ಲಿ ಕಾಣಿಸಿಕೊಂಡೆ. ಆಗ, ಎದುರು ಮನೆ ಹುಡುಗಿ, ನನಗೆ ಒಂದು ಬೊಂಬೆ ಯನ್ನು ತೋರಿಸಿದಳು. ಯಾವುದೋ ನೀಗ್ರೋ ಜನರ ಗೊಂಬೆ; ಅಂತಹ ಗೊಂಬೆಗಳನ್ನ ಸಣ್ಣ ಮಕ್ಕಳ ಕೈಗೆ ಕೊಡಬಾರದು ಎಂದು ನನಗೆ ತೋರಿತು. ನನ್ನ ಮೇಜಿನ ಮೇಲಿದ್ದ ಗಾಂಧಿಜಿಯವರ ಸಣ್ಣ ವಿಗ್ರಹವೊಂದನ್ನು ನಾನೂ ಕಿಟಕಿಯ ಹೊರಗೆ ಹಿಡಿದು ಅಲ್ಲಾಡಿಸಿ ಅವರಿಗೆ ತೋರಿಸಿದೆ. 'ನನ್ನ ಹತ್ತಿರವೂ ಗೊಂಬೆಗಳಿವೆ ಎಂದು ತೋರಿಸಿ ಜಂಬದ ಚಪಲ ತೀರಿಸುತ್ತಿ ದೇನೆ' ಎಂದು ಆ ಮಕ್ಕಳು ತಿಳಿದುವೋ ಏನೋ? ತಕ್ಷಣವೇ ಹುಡುಗ ಕಿಟಕಿಯಿಂದ ಇಳಿದು ಓಡಿ ಹೋಗಿ ಒಂದು ರೈಲು ಎಂಜನ್ನನ್ನು ತೋರಿಸಿದ. ನನಗೆ ರೇಗಿತು. ಕೇವಲ ಮಕ್ಕಳಿಗೆ ಸೋಲುವುದೇ ಎಂದೆನಿಸಿತು. ಮಹಡಿ ಮೇಲೆ ಹೋಗಿ ಒಂದು ಕ್ರಿಕೆಟ್ ಬ್ಯಾಟನ್ನು ಹುಡುಕಿ ತಂದೆ. ಕಷ್ಟಪಟ್ಟು ಕಿಟಕಿಯ ಕಂಡಿಯ ಮೂಲಕ ತುರುಕಿ ಬೀಸಿದೆ. ಮಕ್ಕಳ ಮೋರೆ ಸಪ್ಪ ಗಾಯಿತು. ಕಾದಂಬರಿಯನ್ನು ಮುಂದೆ ಸಾಗಿಸಲು ಕುರ್ಚಿಯಲ್ಲಿ ಕುಳಿತೆ.

ಹತ್ತು ಪಂಕ್ತಿ ಬರೆದು ಮುಗಿಸಿ, ಬಾವಿಗೆ ಬಿದ್ದ ನಾಯಕನನ್ನು ಕಟ್ಟಿ ಮೇಲೆ ಮಲಗಿಸಿ ಸ್ಕೌಟುಗಳ ಕೈಯಿಂದ ಅವನಿಗೆ ಚಿಕಿತ್ಸೆ ನಡೆಸುವುದರೊಳಗೆ, ರಸ್ತೆ ಆಚೆಯಿಂದ "ರೀ!" "ರೀ!" ಎಂಬ ದನಿ ಕೇಳಿ ಬಂತು. ಮನಸ್ಸಿಲ್ಲದ ಮನಸ್ಸಿನಿಂದ ಕುರ್ಚಿಯಿಂದ ಎದ್ದೆ. ಹುಡುಗಿ ತನ್ನ ತಲೆಯ ಮೇಲೆ ಒಂದು ನೀಲಿ ಕಾಗದದ ಟೋಪಿಯನ್ನಿಟ್ಟುಕೊಂಡು ನಗುತ್ತಿತ್ತು. ನನಗೆ ದಿಕ್ಕು ತೋಚದೆ ಹೋಯಿತು. ನನ್ನ ಕೋಣೆಯಲ್ಲಿ ನೀಲಿ ಕಾಗದ ಇರಲಿಲ್ಲ—ಆಳನ್ನು ಅಂಗಡಿಗೆ ಕಳುಹಿಸಿ ತರಿಸುವ ಹಾಗಿಲ್ಲ ನನ್ನ ಸರಸ ಸಲ್ಲಾಪವೊಂದೂ ಅವಳಿಗೆ ತಿಳಿಯದು.... ಸದ್ಯಃ, ದೇವರು ಕೊಟ್ಟ ಮೆದುಳನ್ನೇ ಉಪಯೋಗಿಸಿದೆ. ಎಲೆಕ್ಟ್ರಿಕ್ ದೀಪದ ಮೇಲಿನ ನೀಲಿ ಷೇಡನ್ನೇ ಕಳಚಿ ತಲೆಯ ಮೇಲಿರಿಸಿಕೊಂಡು ಕಿಟಕಿಯಿಂದ ಹಲ್ಲು ಕಿರಿದೆ. ಅವೆರಡೂ ನಕ್ಕು ನಕ್ಕು ಸುಸ್ತಾದುವು. ಆಗಿನ ಉತ್ಸಾಹದಲ್ಲಿ ನನಗೆ ಮೈಮೇಲೆ ಪ್ರಜ್ಞೆಯೇ ಇರಲಿಲ್ಲ. ತಕ್ಷಣವೇ ಆ ಮಕ್ಕಳನ್ನು ಮತ್ತಷ್ಟು ನಗಿಸುವುದಕ್ಕಾಗಿ, ಶಾಯಿ ಕುಡಿಕೆಯಲ್ಲಿ ಬೆರಳನ್ನು ಅದ್ದಿ ಮೀಸೆ ಬಳಿದುಕೊಂಡು ಅವರಿಗೆ ಮೂತಿ ತೋರಿಸಿದೆ.

ಆಗ ನನ್ನ ಮಾವನವರು-ಆಗ ತಾನೆ ಅವರೂರಿಂದ ಬಂದರು—ನನ್ನ ರೂಮಿನೊಳಕ್ಕೆ ನುಗ್ಗಿದರು!

ನನ್ನ ಅವಸ್ಥೆ ನೋಡಿ, ಅವರು, ತಾವು ಬಂದ ಗಾಡಿಯಲ್ಲೇ ಸರಸೂನ ಊರಿಗೆ ಕರೆದುಕೊಂಡು ಹೋದರು. ಸಾಯಂಕಾಲವೇ ಅವರ ಮಾತಿನ ಮೇಲೆ ಹುಚ್ಚಾಸ್ಪತ್ರೆ ಡಾಕ್ಟರು ನನ್ನ ಮನೆಗೆ ಬಂದರು. ನಾನೆಷ್ಟು ಹೇಳಿದರೂ ಅವರು ನಂಬಲೇ ಇಲ್ಲ. ನನ್ನ ಗ್ರಂಥಗಳೇ ನಿದರ್ಶನಗಳಾದುವು.

ನನ್ನ ಕಾದಂಬರಿಯನ್ನ ಅವರು ತೆಗೆದುಕೊಂಡು ಹೋಗಿದ್ದಾರೆ. ಓದಿ ನೋಡಲಿ, ನನಗೇನು? ಓದಿ ಮುಗಿಸುವುದರೊಳಗೆ ಅವರಿಗೇ ಬರುತ್ತೆ ಹುಚ್ಚು!

---

# ಹಾಲಿನ ಲೆಕ್ಕ



೧೯೩೮ ಜನವರಿ ೨ನೆ ತಾರೀಖು; ಗುರುವಾರ ಸಂಜೆ ೬-೩೦. ಬೆಳಗಾಗುತ್ತಲೂ ಬಂದು ಬಾಗಿಲು ಬಡಿಯುವ ಹಾಲಿನವರಿಗೆ ಎಷ್ಟು ಹಣ ಕೊಡಬೇಕಾಗುತ್ತದೆ ಅಂತ ಮೊದಲೇ ನಿರ್ಧರ ಮಾಡುವುದಕ್ಕಾಗಿ ನಾನೂ ಆಕೆಯೂ ಮಾಡುತ್ತಿದ್ದ ಚರ್ಚೆ. ಕೊಂಚ ನೀವೂ ಲಾಲಿಸಿ, ಪರವಾಯಿಲ್ಲ.

" ಹೋದ ತಿಂಗಳು ಹಾಲಿನ ಲೆಕ್ಕ ಎಷ್ಟು ? "

" ಲೆಕ್ಕವೇನು ಮಹಾ ! ನೀವೇ ನೋಡಿ. ಹದಿಮೂರನೆಯ ತಾರೀಖಿನ ವರೆಗೆ ಬೆಳಗ್ಗೆ ಮೂರು ಪಾವು ಹಸುವಿನ ಹಾಲು, ಮೂರು ಪಾವು ಎಮ್ಮೆ ಹಾಲು; ಸಾಯಂಕಾಲ ಒಂದೂವರೆ ಪಾವು ಹಸುವಿನ ಹಾಲು, ಎರಡೂವರೆ ಪಾವು ಎಮ್ಮೆ ಹಾಲು. ಅಷ್ಟೆ. ಒಂದು ದಿನ ಮಾತ್ರ ಎಮ್ಮೆ ಒದ್ದು ಬಿಟ್ಟು ಪಾತ್ರೆ ಮುಗುಚಿಕೊಂಡಿತು; ಒಂದೇ ಒಂದು ಚಟಾಕು ಹಾಕಿಬಿಟ್ಟು ಓಡಿಹೋದನವನು ಮನೆಯಿಂದ ಕೈ ಹಾಲು ತರಲೇ ಇಲ್ಲ...."

" ತಾಳು....ತಾಳು....ಬರೆದುಕೊಂಡು ಬಿಡುತ್ತೇನೆ. ಆದೇ ಮೇಲು.... ಚಟಾಕು ಅಂದರೆ ಎಷ್ಟು ಸೇರು ಅಂತ ಗೊತ್ತಿಲ್ಲವಲ್ಲಾ...."

" ಅಯ್ಯೋ ! ನೀವು ಸ್ಕೂಲು ಮೇಷ್ಟ್ರು ಅಂತ ಆ ಹುಡುಗರಿಗೆ ಏನು ಹೇಳಿಕೊಡುತ್ತೀರೋ, ನಾನು ಬೇರೆ ಕಾಣೆ. ಆದಿರಲಿ; ಮರೆತುಬಿಟ್ಟೆನಲ್ಲಾ....ಒಂಭತ್ತನೆಯ ತಾರೀಖಿನ ದಿನ ನಾವು 'ಮಂಗನ್' ನೋಡುವುದಕ್ಕೆ ಹೋಗಿರಲಿಲ್ಲವೆ ? ಆ ಹೊತ್ತು ಮನೆಗೆ ಬೀಗ ಹಾಕಿತ್ತು ಅಂತ ಹೇಳಿ ಹಾಳಾದವನು ಹೊರಟೇಬಿಟ್ಟ. ಸಾವಿತ್ರಮ್ಮನ ಮನೆಯಲ್ಲಿ ಕೊಡಲೇ ಇಲ್ಲ...ಆದೂ ಅಲ್ಲದೆ, ಹೋದ ತಿಂಗಳ ಹಿಂದಿನ ತಿಂಗಳಿನ ಲೆಕ್ಕದಲ್ಲೇ ಅವನು ನಮಗೆ ಏಳು ಪಾವು ಹಾಲು ಕೊಡಬೇಕಾಯಿತು....ಅದನ್ನೂ ಬರೆದುಕೊಳ್ಳಿ...."

" ಆಗಲೇ ತಲೇ ಸಿಡಿದುಹೋಗುತ್ತಾ ಇದೆ....ಎಲ್ಲಾನೂ ಒಟ್ಟಿಗೆ ಒದರಿಬಿಡಬೇಡ....ಏಳು ಪಾವು ಅಂತ ಹೇಳಿದೆಯಲ್ಲಾ, ಹಸುವಿನ ಹಾಲೋ ಎಮ್ಮೆ ಹಾಲೋ ?...."

" ಹಸು....೧೩ ದಿನದ ಹಾಲಿನ ಲೆಕ್ಕಕ್ಕೆ ಸಿಡಿದು ಹೋಗೋ ತಲೆ ಇಟ್ಟುಕೊಂಡು ನೀವು ಹೇಗೆ ಬಿ. ಎ., ಬಿ. ಟಿ. ಪಾಸು ಮಾಡಿದಿರಿ ಅಂತ ನನಗೆ ಆಶ್ಚರ್ಯ !"

" ಅಲ್ಲ, ಕಣೇ ! ನಾನು ಹೇಳುತ್ತಿದ್ದೆ ನಿನಗೆ ಒಂದು ಪುಸ್ತಕ ಇಟ್ಟು ಕೊಂಡು ಪ್ರತಿ ದಿನವೂ ಇಷ್ಟು ಹಾಲು ಅಂತ ಬರೆದಿಟ್ಟಿದ್ದರೆ...."

" ಈಗ ನಷ್ಟವಾದದ್ದೇನು ? ಲೆಕ್ಕಾಚಾರ ಎಲ್ಲಾನೂ ನನ್ನ ನಾಲಿಗೆ ತುದಿಯಲ್ಲೇ ಇದೆಯಲ್ಲಾ....ಬರೆಯಿರಿ, ಅಂದ್ರೆ"

" ನೋಡು ! ರಾಮಾನುಜಂ ಅಂತ ಒಬ್ಬರಿದ್ದರು; ಮಹಾನು ಭಾವರು. ಪ್ರಚಂಡ ಗಣಿತ ಶಾಸ್ತ್ರಿ. ಆದರೂ ಕೂಡ ಈ ಮನೆ ಹಾಲಿನ ಗುಣಾಕಾರದಲ್ಲಿ ತಳಮಳಾಯಿಸಿ ಹೋಗುತ್ತಾರೆ....ಈಗ ಆತನನ್ನ ನೆನೆಸಿ ಕೊಂಡರೆ ನನಗೇನು ಸುಖವಿಲ್ಲ ಅನ್ನು....ಹೇಳು....ಹದಿಮೂರನೆಯ ತಾರೀ ಖಿನ ವರೆಗೆ...."

" ಅದನ್ನೇ ಹೇಳುತ್ತಾ ಇದೀನಿ. ಬೆಳಗ್ಗೆ ಮೂರು ಪಾವು ಹಸುವಿನ ಹಾಲು, ಮೂರು ಪಾವು ಎಮ್ಮೆ ಹಾಲು. ಹದಿಮೂರು ಅರ್ಧ ಆರೂವರೆ ಸೇರು...."

" ಸುಮ್ಮನೆ ಗಲಾಟೆ ಮಾಡಿಕೊಂಡು ಓಡಿಸಬೇಡ....ಹಸುವಿನ ಹಾಲು ರೂಪಾಯಿಗೆ ಐದು ಸೇರು, ಎಮ್ಮೆ ಹಾಲು ಐದೂವರೆ, ಅಲ್ಲವೇ ?"

" ಓಹೋ ! ಪರವಾಗಿಲ್ಲ ! ಇಷ್ಟೆಲ್ಲಾ ಜ್ಞಾಪಕವಿದೆಯಲ್ಲಾ !"

" ಸದ್ಯಃ ನೀನು ಶಹಬಾಷ್‌ಗಿರಿ ಕೊಡದೇ ಇದ್ದರೆ ಅಷ್ಟೇ ಹೋಯಿತು. ಈ ಹಾಳು ಲೆಕ್ಕ ಬೇಗ ಮುಗಿಸೋಣ....ತಲೆ ನೋವು ಪ್ರಾರಂಭವಾಗಿದೆ....ಹಸುವಿನ ಹಾಲು ಬೆಳಿಗ್ಗೆ ಎಷ್ಟು, ಸಾಯಂಕಾಲ ಎಷ್ಟು ? "

" ಸಾವಿರಸಲ ಹೇಳಿ ಆಯಿತು. ಬೆಳಿಗ್ಗೆ ಮೂರು, ಸಂಜೆ ಒಂದೂವರೆ, ಒಟ್ಟು ನಾಲ್ಕೂವರೆ ಪಾವು; ಹದಿಮೂರು ದಿನ....ಆಚೆ ತಿಂಗಳ ಏಳು ಪಾವು, ಸಿನಿಮಾಗೆ ಹೋದ ದಿನದ್ದು ಒಂದೂವರೆ ಪಾವು ಇದಿಷ್ಟೂ ಕಳೆಯಬೇಕು."

"ಅಯ್ಯೋ! ಕಳೆಯುವುದು, ಕೂಡುವುದು. ಆ ಮೇಲೆ ನಿಧಾನ ವಾಗಿ ಮಾಡಿದರಾಯಿತು. ಈಗ ಈ ಲೆಕ್ಕ ಮುಗಿಸಿಬಿಡುತ್ತೇನೆ....ಹದಿ ಮೂರು ಒಂದು ಹದಿಮೂರು; ಹದಿಮೂರೆರಡು ಇಪ್ಪತ್ತಾರು; ಹದಿಮೂರು ಮೂರಲ ನಲವತ್ತೊಂಭತ್ತು; ಹದಿಮೂರು ನಾಲ್ಕಲ ಎಪ್ಪತ್ತೆರಡು...."

"ಏನು, ಏನು! ಮಗ್ಗಿ ಯಾಕೋ ತಲೆಕೆಳಗಾಯಿತು....ಲೆಕ್ಕದಲ್ಲಿ ನೀವೇ ಲೋಕಮಾನ್ಯ! ಹದಿಮೂರು ನಾಲ್ಕು ಐವತ್ತೆರಡು, ಗೊತ್ತಾ ಯಿತೇ?"

"ಹಾಗೋ! ಸರಿ! ಅದನ್ನೇ ಬರಕೊಳ್ಳುತ್ತೇನೆ. ಹದಿಮೂರರ್ಧ...."

"ಆರೂವರೆ."

"ಹುಂ. ಆರೂವರೆ! ಅಂದರೆ, ಐವತ್ತೆಂಟೂವರೆ...."

"ಅದರಲ್ಲಿ ಏಳೂ, ಒಂದೂವರೆ ಎಂಟೂವರೆ ತೆಗೆಯಿರಿ...."

"ತೆಗೆದೆ."

"ಈಗೆಷ್ಟು ಬಂತು? ಐವತ್ತು ಪಾವು ತಾನೆ...."

"ಸರಿ! ಐವತ್ತು ಅಂತ ಬರೆಯುತ್ತೇನೆ. ನೀನು ಹೇಳಿದ್ದು ಸರಿ ಇರಬೇಕು. ಈಗ, ಇಷ್ಟಕ್ಕೆಷ್ಟು ರೂಪಾಯಿ ಅಂತ ನೋಡಬೇಕಲ್ಲವೆ?"

"ಹುಂ. ನೋಡದೆ!"

"ಬೇಗಬೇಡ, ಕಣೆ. ಕೊಂಚ ಹೇಳಿಕೊಡು...."

"ಹಾಗಾದರೆ ಐವತ್ತು ಪಾವನ್ನು ಸೇರು ಮಾಡಿ...."

"ಮಾಡುತ್ತೇನೆ....ನಾಲ್ಕೊಂದು ನಾಲ್ಕು....ಬಾಕಿ ಒಂದು....ಹತ್ತು ....ನಾಲ್ಕೆರಡು ಎಂಟು. ಬಾಕಿ....ಎರಡು....ಹನ್ನೆರಡು ಸೇರು, ಎರಡು ಪಾವು...."

"ಹತ್ತು ಸೇರಿಗೆ ಎರಡು ರೂಪಾಯಿ; ಎಂಟಾಣೆಗೆ ಎರಡೂವರೆ ಸೇರು....ಎರಡೂವರೆ ರೂಪಾಯಿ ಆಯಿತು, ಅಲ್ಲವೆ ನೋಡಿ...."

"ನೋಡುವುದೇನು?....ಸದ್ಯಃ, ೧೩ನೇ ತಾರೀಖಿನ ವರೆಗೆ ಹಸುವಿನ ಹಾಲಿನ ಲೆಕ್ಕ....ಎರಡೂವರೆ ರೂಪಾಯಿ, ಅಂತ ನಿಶ್ಚಯವಾಯಿತು....ಈಗ ಹಾಳು ಎಮ್ಮೆ ಹಾಲು...."

"ಎಮ್ಮೆ ಹಾಲಿನ ಲೆಕ್ಕವೇನು ಬಹಳ ಸುಲಭ! ಬೆಳಿಗ್ಗೆ ಮೂರು ಪಾವು, ರಾತ್ರೆ ಎರಡೂವರೆ, ಅಷ್ಟೆ. ಆದರೆ, ಎರಡು ದಿನ ಸಂಜೆ ವಿಪರೀತ

ಮಳೆ ಬಿತ್ತು ಅಂತ ನೆಪ ಹೇಳಿ ಬರೀ ನೀರು ತಂದಿದ್ದ; ಅದಕ್ಕೆ ಕಾಸು ಕೊಡುವುದೇ ಇಲ್ಲ ಅಂತ ಆಗಲೇ ಅವನಿಗೆ ಹೆದರಿಸಿದೇನೆ....ಅದನ್ನು ಲೆಕ್ಕಕ್ಕೆ ಸೇರಿಸಕೂಡದು...."

"ಇಲ್ಲಿ ನೋಡಿ! ಸೇರಿಸುವುದು ಬಿಡುವುದು ಆಮೇಲಾಗಲಿ; ಅಂದರೆ ನೀನೊಪ್ಪುವುದಿಲ್ಲವಲ್ಲಾ !.... ಈ ಗಲಾಟೆಯಲ್ಲಿ ನೀನು ಮೊದಲು ಹೇಳಿದ ಲೆಕ್ಕವೇ ಮರೆತು ಹೋಯ್ತು....ಇನ್ನೊಂದು ಸಲ ಹೇಳು....ಎಷ್ಟು ಹಾಲು ........"

"ಕೈಯ್ಯಲ್ಲಿ ಕಾಗದ ಕಡ್ಡಿ ಇರುವುದೇತಕ್ಕೋಸ್ಕರ? ಗೀಚಬಾರದಾಗಿತ್ತೇ? ನನಗೂ ತಲೆ ನೋವು ಬರುತ್ತಾ ಇದೆ....ಬೆಳಗ್ಗೆ ಮೂರು ಪಾವು, ರಾತ್ರಿ ಎರಡೂವರೆ!"

"ಅಯ್ಯೋ, ರಾಮ! ಬೆಳಗ್ಗೆ ಸಂಜೆ ಒಟ್ಟು ಎಷ್ಟು ಅಂತ ಒಂದೇ ಸಲ ಹೇಳಿ ಬಿಡಬಾರದೇ? ಸುಮ್ಮನೆ ಪೀಡಿಸಬೇಡ...."

"ನನ್ನ ಮೇಲೆ ಎಗರಾಡಿ ಏನು ಪ್ರಯೋಜನ....ನೀವೇ ಎರಡು ಹೊತ್ತೂ ಗುರುತು ಹಾಕಿ....ಯಾರು ಬೇಡಾ ಅಂತಾರೆ....ಮೂರು ಎರಡೂವರೆ ಸೇರಿಸಿದರೆ ಎಷ್ಟು ಅಂತ ನಾನು ಹೇಳಿಕೊಡಬೇಕೆ?"

"ಐದೂವರೆ ಅಂತ ಅಂದುಬಿಟ್ಟರೆ ನಿನಗಾಗುವ ನಷ್ಟವೇನು....? ಶಂಖದಿಂದ ಬಂದರೆ ತೀರ್ಥ ಅಂತ ನಾನೂ ಕುಳಿತಿದೇನೆ....ಅನ್ನು...."

"ಐದೂವರೆ! ಸಾಕೆ....ಹದಿಮೂರು ದಿನಕ್ಕೆ ಲೆಕ್ಕ ಹಾಕಿ...."

"ಅರವತ್ತೈದು....ಆರೂವರೆ....ಎಪ್ಪತ್ತೊಂದೂವರೆ....ಸರಿಯೇ ? ತಪ್ಪಾದರೆ ತಿದ್ದು ! ನಿಂತುಕೊಂಡು ನಗಬೇಡ...."

"ಅವಕ್ಕಲ್ಲ ನಾನು ನಗುವುದು! ಅದರಲ್ಲಿ ನೀರು ಹಾಲು ಕಡಿಮೆ ಮಾಡಿ...."

"ನೀನು ಕಡಿಮೆ ಮಾಡಿದರೆ ಆ ಕಾರ್ಕೋಟಕ ಸುಮ್ಮನಿರುತ್ತಾನೆಯೇ? ರಂಪ ಎಬ್ಬಿಸಿ ಬಿಡುತ್ತಾನೆ, ಕಣೆ! ಬೀದಿಯವರನ್ನೆಲ್ಲಾ ಮನೆ ಬಾಗಿಲಲ್ಲಿ ಸೇರಿಸಿ ಬಿಡುತ್ತಾನೆ"

"ಇರಲಿ!....ಆ ಮೇಲೆ...."

"ಅದೇಕೆ ಇರಬೇಕು? ಧರ್ಮರಾಯನ ಹಾಗೆ ನೀವು ನೀರಾಗಲಿ ಹಾಲಾಗಲಿ ಋಣ ತೀರಿಸಿಬಿಡುವುದು ಅಂತ ಅವನಿಗೆ ಕಾಸು ಕೊಟ್ಟು,

ಕೊಬ್ಬಿಸಿ ಬಿಟ್ಟಿದೀರಿ....ಅವನ ಕೂಗಾಟಕ್ಕೆ ಹೆದರಿಕೊಂಡು ಕೇಳಿದಷ್ಟು ಕೊಟ್ಟುಬಿಟ್ಟರೆ ನಾಳೆಯಿಂದ ಅವನು ಬರೀ ನೀರನ್ನೇ ತರುತ್ತಾನೆ. ಆಮೇಲೆ ಕಾಫಿ ಚೆನ್ನಾಗಿಲ್ಲ, ಮೊಸರು ಏಕೆ ಹೀಗಿದೆ, ಅಂತ ನನ್ನ ಹತ್ತಿರ ಗೋಳು ಮುಖ ಹಿಡಿದು ಪ್ರಯೋಜನವಿಲ್ಲ....ಹೇಳಿದೇನೆ...."

"ಅಯ್ಯೋ ದೇವರೇ! ಯಾವ ಹೊತ್ತೋ, ಏನೋ ಅಂದದ್ದಕ್ಕೆ ಈಗ ಸೇಡು ತೀರಿಸುತ್ತಿದೀಯಾ....ಆ ಮಾತು ಬೇಡ ಈಗ....ಎಮ್ಮೆ ಹಾಲು ಎಷ್ಟಾಯಿತು?....ಎಪ್ಪತ್ತು ನಾಲ್ಕೂವರೆ ಪಾವು ತಾನೆ?...."

"ಬಾಯಲ್ಲಿ ಹೇಳುವುದೊಂದು, ಬರೆಯುವುದು ಮತ್ತೊಂದು ಅಂತ ಕಾಣುತ್ತದೆ....ತಿದ್ದಿ ಅದನ್ನ....ಎಪ್ಪತ್ತೊಂದೂವರೆ ಅಂದ್ರೆ...."

"ಸರಿ, ಅಷ್ಟಕ್ಕೆಷ್ಟು ರೂಪಾಯಿ?"

"೨೨ ಪಾವಿನ ಒಂದು ರೂಪಾಯಿ ಅಲ್ಲವೆ....ಮೂರು ರೂಪಾಯಿಗೆ ೬೬; ನಾಲ್ಕಾಣೆಗೆ ಐದೂವರೆ.......ಎಪ್ಪತ್ತೊಂದೂವರೆ ಪಾವು ಸರಿ ಹೋಯಿತು....೩ ರೂಪಾಯಿ ೪ ಆಣೆ, ಅಷ್ಟೆ."

"ಒಳ್ಳೆ ನೀರುಕುಡಿದ ಹಾಗೆ ಮಾಡಿಬಿಡುತ್ತೀಯಲ್ಲಾ ಅಂತೀನಿ, ಲೆಕ್ಕಾನಾ! ಲೋವರ್ ಸೆಕೆಂಡರಿ ಕೂಡ ಪೂರ್ತಿ ಮಾಡಿಲ್ಲ ನೀನು, ಅಲ್ಲವೆ?"

"ನಿಮ್ಮ ಶಹಭಾಸ್‌ಗಿರಿ ನನಗೂ ಬೇಕಿಲ್ಲ, ಅಂದ್ರೆ. ನಿಮ್ಮ ಮನೆಯುವರು ಷ್ಕೂಲು ಬಿಡಿಸದೆ ಇದ್ದರೆ ನಾನು ಇಷ್ಟು ಹೊತ್ತಿಗೆ ಎಂ. ಎ., ನೂ ಮಾಡಿರುವೆ; ಬಿ. ಟಿ. ನೂ ಮಾಡಿರುವೆ."

"ಆಗ ನನ್ನ ತಾಪತ್ರಯ ಕೇಳುವವರು ಯಾರು? ಸರಿ. ಎಲ್ಲಿಗೋ ಕೊಂಕಣಕ್ಕೆ ಹೋಯಿತು ಮಾತು....ಈಗ ಹಸುವಿನ ಹಾಲು ಎರಡೂವರೆ, ಎಮ್ಮೆ ಹಾಲು ಮೂರೂಕಾಲು, ಒಟ್ಟು ಐದೂಮುಕ್ಕಾಲಾಯಿತು...."

"ಹದಿಮೂರು ದಿನಗಳ ಲೆಕ್ಕ....ಅಲ್ಲದೆ, ಎಮ್ಮೆ ಒದ್ದ ದಿನ ಚಟಾಕು ಮಾತ್ರ ಕೊಟ್ಟ....ಅದನ್ನ ಮರೆತುಬಿಟ್ಟೀವಲ್ಲಾ...."

"ಅಯ್ಯೋ ಗ್ರಹಚಾರವೇ! ಎಂತಹ ಅವ್ಯವಸ್ಥೆ ನಿನ್ನ ಲೆಕ್ಕ? ಶುದ್ಧ ಅವಲಕ್ಷಣ....ಹೀಗಾದರೆ, ಹಾಲು ಏಕೆ ತೆಗಿದುಕೊಳ್ಳಬೇಕು ಅಂತೀನಿ...."

"ನನಗೋಸ್ಕರ ಹಾಲು ಕೊಂಡಕೊಳ್ಳಬೇಡಿ. ಬೆಳಿಗ್ಗೆ ಎದ್ದಕೂಡಲೇ ಕಾಫಿ ಕಾಫಿ ಅಂತ ಅಳುತ್ತಾ ಅಡಿಗೆಮನೆ ಹೊಸಲಲ್ಲಿ ಯಾರು ಹೊರಳಾಡು

ತ್ತಾರೋ, ಅವರಿಗೋಸ್ಕರ ಸಾಕು....ಬಿಡಿ ಅಂದ್ರೆ....ನಾಳೆಯಿಂದ ಹಾಲೂ ಬೇಡ....ಕೀಲೂ ಬೇಡ....ಈ ರಥ ಹೇಗೆ ಮುಂದೆ ಸಾಗುತ್ತದೋ ನೋಡುತ್ತೀನಿ."

"ರೇಗಬೇಡಮ್ಮ ಮಹಾತಾಯಿ! ನೀನು ರೇಗಿದರೆ ಈ ಬಡಪ್ರಾಣಿ ಹೇಗೆ ಬದುಕಿಯಾನು? ಕತ್ತಲಲ್ಲಿ ಅವನಿಗೆ ಯಾರು ಬೆಳಕು?...."

"ಸಾಕು, ಬಿಡಿ, ಅಂದ್ರೆ....ನನ್ನನ್ನ ಅಪಮಾನಪಡಿಸುವುದಕ್ಕಾಗಿಯೇ ನೀವು ಈಗ ಈ ಲೆಕ್ಕ ತೆಗಿದದ್ದು, ನನಗೆ ಗೊತ್ತಿಲ್ಲವೆ?"

"ಅಲ್ಲ ಕಣೆ! ಒಂದು ಪುಸ್ತಕದಲ್ಲಿ ಗುರುತುಹಾಕಿರು ಅಂತ ಹೇಳಿದ್ದು ತಪ್ಪೆ? ಅಷ್ಟಕ್ಕೆ ನನ್ನನ್ನ ಹೀಗೆ"

"ಬರೆದಿಟ್ಟರೇನು? ಬಾಯಲ್ಲಿ ಹೇಳಿದರೇನು? ನಿಮಗೆ ಲೆಕ್ಕ ಬೇಕು, ಅಷ್ಟೇ ತಾನೇ...."

"ಹೋಗಲಿ. ತಪ್ಪಾಯ್ತು, ಬಿಡು! ಹದಿನಾಲ್ಕನೆಯ ತಾರೀಖಿ ನಿಂದ ಮುಂದಕ್ಕೆ ಲೆಕ್ಕ ಸರೀಸಾಗಿದೆ ತಾನೆ?"

"ಅದುವರೆಗೂ ಕಷ್ಟವಾಗಿತ್ತೇನು?....ಪಾತು, ಪಾತು ಗಂಡ ಇಲ್ಲಿ ಎಷ್ಟು ದಿನ ಇದ್ದರು? ಆರು ದಿನವೋ ಏಳು ದಿನವೋ?"

"ಅವರು ಬಂದದ್ದೂ ಆಯಿತು; ಹೊರಟಿದ್ದೂ ಆಯಿತು....ಈಗ ಆ ಸಮಾಚಾರ ಯಾತಕ್ಕೆ? ಹಾಲಿನ ಲೆಕ್ಕ ಹೇಳು...."

"ಅವರಿಬ್ಬರೂ ಇದ್ದಾಗ ಒಂದು ಪಾವು ಎಮ್ಮೆ ಹಾಲು, ಒಂದೂವರೆ ಪಾವು ಹಸುವಿನ ಹಾಲು, ಹೆಚ್ಚಾಗಿ ತೆಗೆದುಕೊಂಡಿದ್ದೆ...."

"ಎಷ್ಟು ದಿನ ಹೀಗೆ...."

"ಅವರಿದ್ದಷ್ಟು ದಿನ...."

"ನನಗೆ ಜ್ಞಾಪಕವಿಲ್ಲ....ಎಷ್ಟು ದಿನ ಇದ್ದರೋ ಯಾವಾಗ ಎದ್ದರೋ, ನನಗೇನು ಗೊತ್ತು?"

"ಇರಲಿ....ನೆನೆಸಿಕೊಂಡು ಆಮೇಲೆ ಹೇಳುತ್ತೇನೆ....ಲಲಿತುವಿಗೆ ಜ್ವರ ಬಂದಿದ್ದಾಗ ಎಂಟು ದಿನ ಒಂದೂಕಾಲು ಪಾವು ಹಸುವಿನ ಹಾಲು ಹೆಚ್ಚಾಗಿ ತೆಗೆದುಕೊಂಡಿದೇನೆ. ನಾವು ಬೆಂಗಳೂರಿಗೆ ಹೋಗಿದ್ದಾಗ ಬುಧವಾರ, ಗುರುವಾರ, ಶುಕ್ರವಾರ ಬೆಳಗ್ಗೆ ಹಾಲು ತೆಗೆದುಕೊಳ್ಳಲೇ

ಇಲ್ಲ....ಶುಕ್ರವಾರ ಸಂಜೆ ಪಕ್ಕದ ಮನೆಗೆ ಮೂರು ಪಾವು ಎಮ್ಮೆ ಹಾಲು ಕೊಟ್ಟಿದ್ದೆ ಅಂತ ಹೇಳುತ್ತಾನೆ....ಸಾವಿತ್ರಮ್ಮನವರು ಮಾತ್ರ ನಮಗೆ ಎರಡೂವರೆ ಪಾವು ಕೊಟ್ಟರು....ಅದೂ ಬರೀ ನೀರು....ಯಾರ ತಪ್ಪೋ, ಯಾರ ಮೋಸವೋ, ಭಗವಂತನೇ ಬಲ್ಲ....ಆ ಮೂರು ದಿನ ಮಾತ್ರ ನಾಯಿಗೆ ಅಂತ ಸಂಜೆ ಒಂದು ಚಟಾಕು....''

"ನೋಡಿಲ್ಲಿ....ನನಗೆ ಹುಚ್ಚು ಹಿಡಿಯುತ್ತಾ ಇದೆ. ಈ ಹಾಳು ಲೆಕ್ಕ ಮುಗಿಯುವುದರೊಳಗೆ ಕುರ್ಚಿ ಕಾಲು ಕಚ್ಚಿದರೂ ಕಚ್ಚಿದೆ....ಒಂದು ಕೆಲಸ ಮಾಡಿಬಿಡೋಣ. ತಂಟೆ ತಕರಾರು ಏನು ಬೇಡ...ಆ ಹಾಳಾದವನು ಎಷ್ಟು ಬೇಕು ಅಂತ ಕೇಳುತ್ತಾನೋ ಅಷ್ಟನ್ನೂ ಅವನ ಮುಂದಿಟ್ಟು ಕೈ ಮುಗಿದುಬಿಡೋಣ....''

"ಇದು ಯಾವ ನ್ಯಾಯ"

"ಯಾವ ನ್ಯಾಯವೇ? ನಮ್ಮಿಬ್ಬರ ಬುದ್ಧಿಯೂ ಸರಿಯಾಗಿ ಉಳಿಯುವುದಕ್ಕೆ ಬೇಕಾದ ನ್ಯಾಯ...."

"ನಾನೊಪ್ಪುವುದಿಲ್ಲ....ಬೆಳಗಾಗುವ ಹೊತ್ತಿಗೆ ನಾನೇ ಬೇಕಾದರೆ ಲೆಕ್ಕ ಮಾಡಿಟ್ಟಿರುತ್ತೇನೆ. ನನ್ನ ಲೋವರ್ ಸೆಕೆಂಡರಿ ಹೆಚ್ಚೋ, ನಿಮ್ಮ ಬಿ. ಎ., ಬಿ. ಟಿ. ಹೆಚ್ಚೋ, ನೋಡೇಬಿಡೋಣ."

"ಸುಮ್ಮನೆ ನಾನೂ ನೀನು ಜಗಳ ಆಡಿ ಏನೂ ಪ್ರಯೋಜನವಿಲ್ಲ.... ಈ ಹೊತ್ತೂ ನೀನೇ ಗೆಲ್ಲುತ್ತಿಯಾ! ಯಾಕೆ ವೃಥಾ ಶ್ರಮ? ನನ್ನ ಶಾಲೆಯಲ್ಲಿ ಒಬ್ಬ ಹುಡುಗ ಇದ್ದಾನೆ ಇಷ್ಟೇ ಇಷ್ಟು ಎತ್ತರ ಮರಿ ಬೃಹಸ್ಪತಿ. ಬೆಳಗ್ಗೆ ಅವನನ್ನು ಕರೆಸಿ ಕೂರಿಸಿ ಲೆಕ್ಕ ಸರಿಮಾಡಿಸಿಬಿಡುತ್ತೇನೆ. ಅದೆಷ್ಟು ಹೊತ್ತು ಮಹಾ!....ಹಾಲಿನವನನ್ನು ಸಾಯಂಕಾಲ ಬಾ, ಹಣ ತೆಗೆದುಕೊಂಡು ಹೋಗು ಅಂತ ಹೇಳಿಬಿಡು...."

"ಅಂತೂ ನೀವು ದೊಡ್ಡ ಬೃಹಸ್ಪತಿಯಾದದ್ದು ಸಾರ್ಥಕವಾಯಿತಲ್ಲಾ.''

# ಆನೆಯ ಹಣೆಬರಹ

ನಾಮದ ಬಲವೊಂದಿದ್ದರೆ ಸಾಕು! ಆದರೆ, ಯಾವ ನಾಮ? ತೆಂಗಲೆಯೋ? ವಡಗಲೆಯೋ? ಅದೇ ದೊಡ್ಡ ಪ್ರಶ್ನೆ ಆ ದೇವಸ್ಥಾನದಲ್ಲಿ! ಹಿಂದೆ ಒಂದು ಸಲ ಉತ್ಸವ ಮೂರ್ತಿಯನ್ನ ಯಾರೋ ಪುಂಡರು ಕತ್ತಲಲ್ಲೇ ಕದ್ದೊಯ್ದು ತೆಂಗಲೆ ತೊಡೆದು ವಡಗಲೆ ಬಳಿದು ಬೆಳಕು ಹರಿಯುವ ಮೊದಲೇ ಯಥಾ ಸ್ಥಾನದಲ್ಲಿ ತಂದಿರಿಸಿದ್ದರಿಂದ, ಗುಡಿಯೊಳಗೆ ಭಯಂಕರ ಕೇಶಾಕೇಶಿ ನಡೆದು ಆರು ತಿಂಗಳ ಕಾಲ ಊರಿಗೊಂದು ಸ್ಪೆಷಲ್ ಮ್ಯಾಜಿಸ್ಟ್ರೇಟರ ಕೋರ್ಟು ಬಂದಿತ್ತು. ಜಾಗಟೆ, ಜವನಿಕೆ, ಛತ್ರಿ, ಚಾಮರ ಇವೆಲ್ಲದರ ಮೇಲೂ ಯಾವ ನಾಮ ವಿರಾಜಿಸಬೇಕೆಂಬುದನ್ನು ಸಾಲು ಸಾಲಾಗಿ ಕುಳಿತಿರುವ ಮೇಲು ಮೇಲಿನ ನ್ಯಾಯಸ್ಥಾನಗಳು ತಮಗೆ ಮನ ಬಂದಂತೆ ತೀರ್ಮಾನಿಸುತ್ತಿದ್ದರು. ಎಲ್ಲವನ್ನೂ ನೋಡುತ್ತಾ, ಎಲ್ಲರನ್ನೂ ಕಾಪಿಡುತ್ತಾ, ಒಳಗೆ ಕುಳಿತಿದ್ದ ಆ ಪರಾತ್ಪರ ವಸ್ತುವಿಗೂ, ಹತ್ತಾರು ಸಲ ಹೈಕೋರ್ಟಿನವರು ಹಣೇಬರಹವನ್ನು ತಿದ್ದಿದ್ದರು.

ಹೀಗಿರುವಲ್ಲಿ, ಒಂದು ದಿನ, ದೇವಸ್ಥಾನದ ಆನೆಗೂ ತಲೆನೋವು ಬಂತು. ತನ್ನ ವಿಶಾಲ ಮಸ್ತಕದ ಮೇಲೆ ರಾರಾಜಿಸುತ್ತಿದ್ದ ವಡಗಲೆ ನಾಮ ವನ್ನು ಹೊತ್ತು, ಒಂದು ವಿಶೇಷ ಠೀವಿಯಿಂದ ಅದು ಹಾಯಾಗಿ ಹುಲ್ಲು ತಿನ್ನುತ್ತಿತ್ತು. ಆದರೆ ತೆಂಗಲೆಯವರಿಗೆ ಅದರ ನಿಲುವೂ ನಲಿವೂ ಅಸಹ್ಯ ವೆನಿಸಿತು. ಒಂದು ದಿನ ಅವರಲ್ಲಿ ಕೆಲವರು ಗುಂಪುಕಟ್ಟಿಕೊಂಡು ಬಂದು ಆನೆಯ ತಲೆಯಮೇಲೆ ನೀರು ಸುರಿಯಲು ಯತ್ನಿಸಿದರು. ಈ ಸಮಾಚಾರ ವನ್ನು ಕೇಳಿದ ವಡಗಲೆ ವೀರರು ಭಾರಿ ಭಾರಿ ದೊಣ್ಣೆಗಳನ್ನು ಧರಿಸಿ ಧಾವಿಸಿ ಬಂದರು. ಎಂದಿನಂತೆ ಅಂದೂ 'ಮಾರಿಗೌತಣ' ವಾಯ್ತು.

ಈ ಪ್ರಸಂಗ ನಡೆದಮೇಲೆ ದೊಣ್ಣೆವರಿಸೆಯಿಂದ ಪುಣ್ಯ, ಪುರುಷಾರ್ಥ, ಎರಡೂ ದೊರೆಯುವುದಿಲ್ಲವೆಂದು ಮನಗಂಡು, ಇಬ್ಬರೂ ಮೂವರು ತೀಕ್ಷ್ಣ

ತೆಂಗಲೆಯವರು ತಮ್ಮ ಪಂಗಡದ ಪರವಾಗಿ ಸಿವಿಲ್ ಕೋರ್ಟಿನಲ್ಲಿ ದಾವಾ ಹೂಡಿದರು. ದೇವಸ್ಥಾನದ ಆನೆಗೆ ತೆಂಗಲೆನಾಮವೇ ಅನ್ವಯಿಸುವುದೆಂದೂ, ಅದನ್ನು ಬಳಿಯಲು ತಾವು ಸಿದ್ಧರಾಗಿರುವರೆಂದೂ ತಿಳಿಸಿ, ಆ ಕೈಂಕರ್ಯ ವನ್ನು ನೆರವೇರಿಸುವಾಗ ವಡಗಲೆಯವರು ಅಡ್ಡಿಬಾರದಂತೆ ಅವರನ್ನು ತಡೆಯಬೇಕೆಂದೂ ಪ್ರಾರ್ಥಿಸಲಾಯಿತು.

ಮದರಾಸಿನ ಒಬ್ಬರು ಪ್ರಮುಖ ವಕೀಲರು ದಾವಾ ಅರ್ಜಿಯನ್ನು ತಯಾರಿಸಿದರು. ಅವರಿಗೆ ಒಂದು ಸಹಸ್ರ ತೆರಬೇಕಾಯಿತಂತೆ. ಮೈಲಾ ಪೂರಿನ ತಮ್ಮ ಬಂಗಲೆಯ ಮೂರನೇ ಮಹಡಿಯಲ್ಲೇ ಕುಳಿತು ಆತ ಹತ್ತು ನೋಟುಗಳನ್ನು ಬಲಗೈ ನೀಡಿ ಸ್ವೀಕರಿಸಿ, ಮುಗುಳುನಗೆ ಬೀರಿ ಕಬ್ಬಿಣದ ಬೀರುವಿನಲ್ಲಿರಿಸಿದರು!

ಪ್ರಮುಖ ಲಾಯರು ಬರೆದು ಕಳುಹಿಸಿದ ಅರ್ಜಿಯನ್ನ ಆ ಊರಿನ ಸಣ್ಣ ವಕೀಲರೊಬ್ಬರು ಮುನ್ಸೀಫರ ಮುಂದಿಟ್ಟರು. ಅವರಿಗೆ ಫೀಸು ಹೆಚ್ಚಾಗಿ ದೊರೆಯಲೇ ಇಲ್ಲ. ದೇವಸ್ಥಾನಕ್ಕೆ ಹೋದಾಗಲೆಲ್ಲಾ ಎರಡು ತುಳಸೀ ದಳ ಹೆಚ್ಚು! ಅರ್ಘ ಉದ್ಧರಣೆತೀರ್ಥ ಹೆಚ್ಚು! ಮಂಗಳಾರತಿ ಸಮಯದಲ್ಲಿ, "ಹೋ! ಬೆಳಕು ಬಿಡಿ! ನಮ್ಮ ಲಾಯರೆಲ್ಲಿ? ದರ್ಶನ ವಾಯಿತೆ?" ಎಂಬ ಕೂಗು. "ಅಪರೂಪ ದರ್ಶನ! ದೇವರ ಸೇವೆಗೆ ತಾವು ಬರುವುದೇ ಇಲ್ಲವಲ್ಲಾ, ಈಚೆಗೆ? ಇವತ್ತು ಪುರಸತ್ತೋ ಏನೋ? ಕೋರ್ಟಿನಲ್ಲಿ ಕೆಲಸ ಯಾವುದೂ ಇಲ್ಲ ಅಂತ ಕಾಣುತ್ತೆ" ಎಂಬ ಉಪ ಚಾರೋಕ್ತಿ, ಅಷ್ಟೆ.

ಪ್ರತಿವಾದಿಗಳ ಕಡೆ ಸ್ಟೇಟ್‌ಮೆಂಟನ್ನು ತಯಾರಿಸಿದವರೂ ಮೈಲಾ ಪೂರಿನ ಮೂರಂತಸ್ತಿನ ಮಹಡಿ ಮನೆ ಲಾಯರೇ! ಅವರಿಗೂ ಡಯಬಿಟಿಸ್ ಬಂದಿತ್ತು. ಅವರಿಗೂ ಹತ್ತಾರು ಜೂನಿಯರಗಳು; ಮೂರು ಮೋಟರ್ ಗಾಡಿಗಳು ಉಂಟು. ನಾಮಧಾರಿಗಳ ನಾಮ ಬದಲಾಯಿಸಲು ಕೋರ್ಟಿಗೆ ಅಧಿಕಾರವಿಲ್ಲ; ಅಥವಾ, ಇದ್ದರೂ ಎಸ್ಟೊಪ್ಪೆಲ್ ಆಗಿದೆ; ರೆಸ್ ಜೂಡಿಕಾಟ ಬೇರೆ ಇದೆ; ನಾಮಕ್ಕೂ ಲಿಮಿಟೇಷನ್ ಉಂಟು. ಆನೆಯ ಹಣೆ ವಿಶಾಲ ವಾಗಿದೆ ಎಂಬ ನೆಪದಲ್ಲಿ ನಾಮಕ್ಕೆ ಲಿಮಿಟೇಷನ್ ಅನ್ವಯಿಸುವುದಿಲ್ಲವೆಂದು ಹೇಳಲಾಗುವುದಿಲ್ಲ, ಇತ್ಯಾದಿ ಇತ್ಯಾದಿ ಶಾಸಿಗೆ ತಕ್ಕ ಕಗ್ಗ ಅವರೂ ಬರೆ

ದಿದ್ದರು. ಸಾಮದ ಬುಡವನ್ನೇ ಕಿತ್ತೊಗೆಯುವಂತಿತ್ತು ಅವರ ನ್ಯಾಯ ಚಂಚುವಿಗೆ ಸಿಲುಕಿ ಹೊರಬಿದ್ದ ತತ್ವರಚನೆ.

ಹುಟ್ಟುಹಾಕಿದ ಕಟ್ಟಳೆ ಚಿಗುರಿತು. ಇಷ್ಯೂಗಳನ್ನು ನಿಷ್ಕರ್ಷೆ ಮಾಡಿ ವಿಚಾರಣೆಗೆ ದಿನ ಗೊತ್ತುಮಾಡಿ ವೈಲಾಪೂರಿಗೆ ತಂತಿ ಕಳುಹಿಸಿದರು. ಆ ಭಾರೀ ದಿಗ್ದಂತಿಗಳ ಅನುಕೂಲಕ್ಕಾಗಿ ಅಡ್ಜರ್ನ್‌ಮೆಂಟುಗಳ ಮೇಲೆ ಅಡ್ಜರ್ನ್‌ಮೆಂಟುಗಳು ಆರ್ಡರಾದುವು. ಮುನ್ಸಿಫರ ಸಹನೆಯೂ ಬತ್ತಿತು. ಊರಿನ ಬಡಪಾಯಿ ಲಾಯರುಗಳ ಮೇಲೆ ಅವರು ಕೆಂಡಕಾರಿದರು. ನೊಂದು ಹಿಡಿದರು. ಪ್ರಪಂಚ ತಲೆಕೆಳಗಾದರೂ ಮುಂದಿನ ತಾರೀಖಿಗೆ ತಾನು ಕೇಸನ್ನು ವಿಚಾರಣೆಗೆ ತೆಗಿದುಕೊಳ್ಳುವುದು ಖಂಡಿತವೆಂದು ಶಪಥ ಮಾಡಿದರು. ಅವರ ಅಂದಿನ ಗುಡುಗಿಗೆ ಕೋರ್ಟೆಲ್ಲವೂ ನಡುಗಿ ಉಡುಗಿತು. ತುಳಸೀ ದಳದ ಲಾಯರಿಗೆ ಜ್ವರ ಬಂತು.

ಆ ದಿನದ ಹಿಂದಿನ ದಿನ, ಎಗ್ಮೂರು ಸ್ಟೇಷನಿಂದ ಹೊರಟ ಎಸ್. ಐ. ಆರ್. ಕಂಪನಿಯ ಟ್ರಿವೇಂಡ್ರಂ ಎಕ್ಸ್‌ಪ್ರೆಸ್ ಹೊರಟಿದ್ದೇ ಒಂದು ಹೊಸ ಮೋಜಸ್ಸಿನಿಂದ! ಭುಕ್ ಭುಕ್ ಭುಕ್, ಭುಕ್ ಭುಕ್ ಭುಕ್ ಎಂದು ಅದು ಏದಿದ್ದೇ ಒಂದು ಹೊಸ ಉದ್ಯೋಗದ ಉದ್ವೇಗದಿಂದ! ಏಕೆಂದರೆ, ಅಂದು ಆ ಗಾಡಿಯಲ್ಲಿ, ಒಂದನೆಯ ನಂಬರ್ ಡಬ್ಬಿಯಲ್ಲಿ ಇಬ್ಬರು ಹೆಸರಾಂತ ಟಗರುಗಳೂ ಎರಡನೆಯ ದರ್ಜೆಯ ಗಾಡಿಯಲ್ಲಿ ಅವರ ಜೂನಿಯರುಗಳಾದ ಎಂಟು ಸಾದಾ ಲಾಯರುಗಳೂ ಲಗೇಜ್ ಡಬ್ಬಿಯಲ್ಲಿ ನಾನೂರು ಲಾ ರಿಪೋರ್ಟುಗಳೂ ಇದ್ದುವು. ಅಂದಮೇಲೆ, ರೈಲಿಗೆ ದುರಹಂಕಾರ ಹಿಡಿದಿದ್ದರಲ್ಲಿ ಆಶ್ಚರ್ಯವೇನಿದೆ? ದೇವಸ್ಥಾನದ ಆನೆಯ ಮಸ್ತಕಾಭಿಷೇಕ ಪುನರ್ಮಸ್ತಕಾಲಂಕಾರ ಅಥವಾ ನಾಮಪಾಲನೆ ಇತ್ಯಾದಿ ಕೈಂಕರ್ಯಗಳಲ್ಲಿ ತನಗೂ ಒಂದು ಪಾತ್ರ ಲಭಿಸಿದ್ದಕ್ಕಾಗಿ ಆ ರೈಲಿಗೂ ಆನಂದ! ಅದು ವಡಗಲೆ-ತೆಂಗಲೆ, ತಂಗಲೆ-ವಡಗಲೆ, ವಡಗಲೆ-ತೆಂಗಲೆ ಎಂದು ಕಂಬಿ ಕಂಬಿಗೂ ಘೋಷಿಸುತ್ತಾ ದಾರಿಯುದ್ದಕ್ಕೂ ಅಡ್ಡಲಾಗಿ ಮಲಗಿ ನಿದ್ದೆ ಮಾಡುತ್ತಿದ್ದ ಮರದ ತುಂಡುಗಳನ್ನು ಎಚ್ಚರಿಸುತ್ತಾ ಆನೆಯಿದ್ದ ಊರಿನ ನಿಲ್ದಾಣಕ್ಕೆ ಬೇಗಬೇಗನೆ ಸಾಗಿತು.

ವಿಚಾರಣೆಯ ದಿನ. ನ್ಯಾಯಸ್ಥಾನದ ಒಳಗೂ ಹೊರಗೂ ಜನ ಸಂದಣಿ ಬಹಳ. ಭಕ್ತರ ಸಮೂಹ, ಕಿಕ್ಕಿರಿದು ಹಳ್ಳಿಕಿರಿದು ನಿಂತಿದೆ ಉಭಯ ನಾಮದವರೂ ದಂಡೋಪದಂಡವಾಗಿ ನೆರೆದಿದಾರೆ. ಹನ್ನೊಂದೂವರೆ ಗಂಟೆಗೆ ಸರಿಯಾಗಿ ವಾದಿಗಳ ಪರವಾದ ದಿಗ್ದಂತಿ ಎದ್ದರು. ತಮ್ಮ ಮಾತನ್ನು ಪ್ರಾರಂಭಿಸಲು ತಾಂಬೂಲ ತುಂಬಿದ ಬಾಯನ್ನು ತೆರೆದರು. ಆದರೆ, ಪ್ರತಿವಾದಿಗಳ ಪರ ಲಾಯರೂ ಅವರ ಸಂಗಡಲೇ ಎದ್ದರು. ಪ್ರೇಕ್ಷಕ ರೆಲ್ಲ ಕಲಹಕುತೂಹಲರಾಗಿ ಕಿವಿಯಾಡಿಸುತ್ತ ನಿಂತಿದ್ದರು. "ಕೊಂಕುಳಲ್ಲಿ ದೊಣ್ಣೆ, ಕೈಯಲ್ಲೂ ದೊಣ್ಣೆ" ಸಹಿತವಾಗಿ ಅವರು ಸಿದ್ಧರಾದರು. ವಡಗಲೆ ಯವರ ಲಾಯರು ಕಟ್ಟಳೆಗೆ ಅತಿ ಮುಖ್ಯವಾದ 'ಶ್ರೀ ಆನೆ'ಯನ್ನು ಸಾಕ್ಷಿ ಗಳ ಪಟ್ಟಿಗೆ ಸೇರಿಸದೆ ಇರುವುದು ತೀರ ಅನ್ಯಾಯವೆಂದೂ ಆನೆ ಎಂಬ ಪ್ರಾಣಿ ವಿಶೇಷಕ್ಕೆ ಮಾನವನಿಗಿರುವಂತೆಯೇ ಪಂಚಕೋಶಗಳೂ ಪಂಚ ಪ್ರಾಣಗಳೂ ತಾಪತ್ರಯಗಳೂ ನಿತ್ಯಾನಿತ್ಯ ವಸ್ತು ವಿವೇಕವೂ ಉಂಟೆಂದೂ ಕೇಳಿದ ಪ್ರಶ್ನೆಗೆ ಆನೆ ತಲೆಯಲ್ಲಾಡಿಸುವುದೆಂದೂ ಆನೆ ಸಾಕ್ಷ್ಯ ಕೊಡ ಬಲ್ಲುದು ಎಂಬುದಕ್ಕೆ ಗಜೇಂದ್ರಮೋಕ್ಷದ ಕಥೆಯೇ ನಿದರ್ಶನವೆಂದೂ ಹೇಳಿ ಅವರು ಮುನ್ಸೀಫರನ್ನು ಬೆಪ್ಪು ಹಿಡಿಸಿದರು. ತೆಂಗಲೆಯವರ ಲಾಯರೂ ಕೂಡ ಬುದ್ಧಿ ಚಾತುರ್ಯದಲ್ಲಿ ಏನೂ ಕಡಮೆ ಇರಲಿಲ್ಲ. ಎದುರು ಪಾರ್ಟಿಯವರ ವಾದ ಸರಣಿಯನ್ನು ಅವರು ಚೆನ್ನಾಗಿ ಪ್ರತಿ ಭಟಿಸಿದರು. ತಾವು ಮದ್ರಾಸಿನಿಂದ ತಂದಿದ್ದ "ಮಹಾಪ್ರಾಣಿನಿಘಂಟು" "ಅಜಗಜೋಪನಿಷತ್ತು" "ಪ್ರಾಣಿದಯಾಸಂಘದ ವಾರ್ಷಿಕ ವರದಿ" "ಎಲಿಫೆಂಟಾಸಿಸ್ ಚಿಕಿತ್ಸೆ" ಎಂಬ ಉದ್ಗ್ರಂಥಗಳಿಂದ ಅವರು ಅನೇಕ ಪುಟಗಳನ್ನು ಓದಿ ತೋರಿಸಿದರು. ಆನೆಯ ಹುಟ್ಟುಗುಣ ಪೆಟ್ಟುಗುಣಗಳನ್ನು ವಿವರಿಸಿ ಹಣೆಯಲ್ಲಿ ಬರೆದದ್ದನ್ನು ಓದುವ ಶಕ್ತಿ ಅವುಗಳಿಗಿಲ್ಲವೆಂದು ಹೇಳಿ ದರು, ಅಲ್ಲದೆ, ಕೋರ್ಟಿನೊಳಕ್ಕೆ ಬರಲಾಗದ ಸಾಕ್ಷಿಯನ್ನು ಪಟ್ಟಿಗೆ ಸೇರಿ ಸದೆ ಇರುವುದು ಕಾನೂನಿಗನುಗುಣವಾದದ್ದೇ ಎಂದು ಸಾಧಿಸಲು ನೂರಾರು ಹಿಂದಿನ ಕೇಸುಗಳ ತೀರ್ಪುಗಳನ್ನು ತೋರಿಸಿಕೊಟ್ಟರು. ರೇಲ್ವೆ ನಿಲ್ದಾಣ ದಿಂದ ಲಾರಿಯಲ್ಲಿ ತಂದ ಗ್ರಂಥರಾಶಿಯೆಲ್ಲವೂ ಕೋರ್ಟಿನಲ್ಲಿ ಚೆಲ್ಲಾಪಿಲ್ಲಿ ಯಾಗಿ ಬಿದ್ದಿದ್ದುವು.

ಅಲ್ಲಿಂದ ಮುಂದಕ್ಕೆ ವಿಚಾರಣೆ ನಿರ್ವಿಘ್ನವಾಗಿ ಸಾಗಿತು. ಪೈಲ್ವಾನರಿಬ್ಬರೂ ತಮ್ಮ ಹೊಸ ಪಟ್ಟುಗಳಿಂದ ಊರಿನ ಲಾಯರುಗಳನ್ನೂ ಭಕ್ತವೃಂದವನ್ನೂ ಮೆಚ್ಚಿಸಿದರು. ಲಂಡನ್, ರಂಗೂನ್, ಕೋಲಂಬೊ ಮೊದಲಾದ ನಗರಗಳಲ್ಲಿನ ಹೈಕೋರ್ಟುಗಳಲ್ಲೂ ಆನೆ ನಾಮ ಕಲೆ ವಡೆ ತೆಂಗುಹಣೆ ಮೊದಲಾದ ವಿಷಯಗಳಿಗೆ ಸಂಬಂಧಿಸಿದ ಎಲ್ಲ ತೀರ್ಪುಗಳನ್ನೂ ಮುನ್ಸೀಫರ ಮುಂದೆ ಉಪಹರಿಸಲಾಯಿತು. ಮದ್ರಾಸಿನಿಂದ ಬಂದಿದ್ದ ಜೂನಿಯರುಗಳೂ ಸೀನಿಯರುಗಳೂ ಪುಸ್ತಕಗಳೂ ಮತ್ತೆ ಡಬ್ಬಿಗಳನ್ನು ಸೇರಿದುವು. ರೈಲೂ ಹೊರಟಿತು.

ಅಪರ ಆಚೆ ಸೋಮವಾರ ಮುನ್ಸೀಫರು ತೀರ್ಪುಕೊಟ್ಟರು!.... ತೆಂಗಲೆಯವರು ಜಯಭೇರಿ ಹೊಡೆದರು. ಕಂಡಕಂಡ ವಡಗಲೆಯವರನ್ನು ಮೂದಲಿಸಿದರು. ಆನೆಯನ್ನು ಹೆಗಲ ಮೇಲೆ ಎತ್ತಿಕೊಂಡು ಊರ ಬೀದಿಗಳಲ್ಲೆಲ್ಲ ಓಡಾಡಬೇಕೆಂಬುವಷ್ಟು ಅವರಿಗೆ ಆನಂದ ಉಕ್ಕಿ ಬಂತು. ಆದರೆ, ಆನೆಯ ಸುತ್ತ ನಿಂತಿದ್ದ ತೆಂಗಲೆಯವರಿಗೆ, ಅಪೀಲು ತೀರ್ಮಾನವಾಗುವವರೆಗೂ ನಾಮಹರಣ ಮಾಡಕೂಡದೆಂದು ವಡಗಲೆಯವರು, ನ್ಯಾಯ ಹೇಳಿದರು. ಸರಿ! ಅಪೀಲಿನಲ್ಲಿ ಅವರೇ ಗೆದ್ದರು. ವಡಗಲೆಯೇ ವೇದೋಕ್ತವೆಂದು ಡಿಸ್ಟ್ರಿಕ್ಟ್ ಜಡ್ಜರಿಗೆ ತೋರಿತು. ಮುಂದೆ, ಅಪೀಲು ಎರಡನೆಯ ಅಪೀಲು ವಿಮರ್ಶೆ ಪುನರ್ವಿಮರ್ಶೆ ಪರಾಂಬರಿಕೆ ಇತ್ಯಾದಿ ಹಂತಗಳನ್ನೆಲ್ಲ ಹತ್ತಿ ಹೈಕೋರ್ಟಿನವರೂ ನಾಮದ ಚರ್ಚೆ ನಡೆಸಿದರು. ಮುನ್ಸೀಫರ ಅಭಿಪ್ರಾಯ ಅಸಾಧುವೆಂದು ಹೈಕೋರ್ಟಿನವರೂ ಹೇಳಿದ ಮೇಲೆ, ತೆಂಗಲೆಯವರು ಸಮುದ್ರದಾಚೆ ದ್ವೀಪಾಂತರದಲ್ಲಿ ತಮಸಾನದೀ ತೀರದಲ್ಲಿ ವಾಸ ಮಾಡುವ ಪ್ರಿವಿಕೌನ್ಸಿಲ್‌ನವರನ್ನು ಶರಣಹೋದರು. ಅವರು ತೆಂಗಲೆಗೆ 'ತಥಾಸ್ತು' ಅಂದರು.

ಒಂದುದಿನ ಬೆಳಗ್ಗೆ ಏಳು ಏಳೂವರೆ ಘಂಟೆ ಇರಬಹುದು. ಕಿರುಬಿಸಿಲಾದರೂ ಉರಿಬಿಸಿಲು! ಭಂಡಮಾರುತನು ಎಲ್ಲೋ ಹೋಗಿ ಅಡಗಿಕೊಂಡಿದ್ದನು. ಪಕ್ಷಿಗಳ ಕಲಕಲ ನಿನಾದಕ್ಕೆ ಬದಲು ತೆಂಗಲೆ ವಡಗಲೆಯವರ "ಅಡಾ-ಪೋಡಾ-ವಾಡಾ" ವಾಗ್ವಾದ! ನಾಮಹರಣಕ್ಕೆ ಅದೇ ಸುಮುಹೂರ್ತವೆಂದು ತೆಂಗಲೆ ಜೋಯಿಸರು ಹೇಳಿದ್ದರು.

ಆನೆಯ ಸುತ್ತ ಡಿಂಗರಿಗರು ಎದೆತಟ್ಟಿಕೊಂಡು ನಿಂತಿದ್ದರು. ಆನೆಯ ಹಣೆಯಲ್ಲಿ ತೆಂಗಲೆನಾಮ ಬಿದ್ದಕೂಡಲೇ ಗಗನವನ್ನು ಭೇದಿಸುವ ರೀತಿಯಲ್ಲಿ ವಾದ್ಯಘೋಷ ಮೊಳಗಿಸಲು ನಾದಸ್ವರದವರು ಹತ್ತಿರವೇ ಇದ್ದರು. ದೊಂಬಿ ಬಲಿತು ದಂಗೆಯಾದರೆ ಏನು ಗತಿ ಎಂಬ ಹೆದರಿಕೆಯಿಂದ ಅಧಿಕಾರಿಗಳು ಕರೆಸಿದ ಇಬ್ಬರು ರಿಸರ್ವ್ ಪೋಲೀಸಿನವರು ಅನತಿದೂರದಲ್ಲೇ ಬಂದೂಕ ಧಾರಿಗಳಾಗಿ ಹಾಜರಿದ್ದರು.

ವಡಗಲೆ ನಾಮವನ್ನು ಅಳಿಸಿದ್ದಾಯಿತು. ಗಲಾಟೆ ಏನೂ ನಡೆಯುಲಿಲ್ಲ. ತೆಂಗಲೆಯ ಕಲಾನಿಪುಣರಾದ ಅನಂತಯ್ಯಂಗಾರರು ಒಂದು ಪೀಠವನ್ನು ಹತ್ತಿ ಆನೆಯ ಹಣೆ ಮೇಲೆ ಇನ್ನೇನು, ಹೊಸ ಬರಹ ಹಚ್ಚಬೇಕು.... ....ಆಗ, ಚಂದ್ರಮತೀದೇವಿಯನ್ನು ಕಡಿದು ಕೊಲ್ಲಲು ಮೇಲಕ್ಕೆತ್ತಿದ ಚಂದ್ರಹಾಸವನ್ನು ಪರಶಿವನು ಬಂದು ಹಿಡಿದಂತೆ, ಇಬ್ಬರು ವಡಗಲೆ ವೀರರು ಮುಂದಕ್ಕೆ ಹಾರಿ, "ತಾಳಿ! ತಾಳಿ!" ಅಂದರು. ಆನೆಯನ್ನು ಹಿಂತಿರುಗಿಸಿ ನಿಲ್ಲಿಸಿ, "ಇಲ್ಲ ಬಳಿಯೋಣವಾಗಲಿ!" ಅಂದರು. ಡಿಕ್ರಿಯನ್ನು ಮತ್ತೊಂದು ಸಾರಿ ನೆರೆದ ಜನಸಮೂಹದೆದುರು ಓದಿಸಿದರು. "ದೇವರ ಸೇವೆಗೆ ದೇವಸ್ಥಾನದಲ್ಲಿ ಹಾಲಿ ಇರುವ ಆನೆಗೆ ತೆಂಗಲೆ ಹಾಕತಕ್ಕದ್ದು" ಎಂದು ಅದರಲ್ಲಿ ನಮೂದಾಗಿತ್ತು. ಆನೆಯ ವಿಶಾಲವಾದ ಚರ್ಮಭೂಮಿಯಲ್ಲಿ ಎಲ್ಲಿ ಬಳಿಯಬೇಕೆಂದು ಅದರಲ್ಲಿ ನಿಖರವಾಗಿ ಸ್ಪಷ್ಟಪಡಿಸಿರಲಿಲ್ಲ. ಎಲ್ಲಿ ಎಂಬ ಪ್ರಶ್ನೆಗೆ ಕೋರ್ಟಿನವರೇ ಉತ್ತರ ಹೇಳಲಿ. ಅದುವರೆಗೂ ಆನೆಗೆ ಯಥಾ ಸ್ಥಿತಿ ವಡಗಲೆ ನಾಮವೇ ಇರಲಿ, ಎಂದು ಅವರು ಚೀತ್ಕಾರ ಮಾಡಿದರು.

ಅನಂತಯ್ಯಂಗಾರರು ಪೀಠದಿಂದ ಬಣ್ಣಸಹಿತ ಇಳಿದರು. ಆನೆಗೂ ಕೂಡ ಕೊಂಚ ಆಶಾಭಂಗವಾದಂತೆ ಕಾಣಿಸಿತು. ನಾದಸ್ವರದವರನ್ನು ವಡಗಲೆಯವರೇ ತಮ್ಮ ಕಡೆಗೆ ಒಲಿಸಿಕೊಂಡರು. ಆನೆಯನ್ನು ಹಳೇ ನಾಮಸಹಿತವಾಗಿ ಅವರು ಮೆರವಣಿಗೆ ಕರೆದುಕೊಂಡು ಹೋದರು.

ಮಾರನೆಯ ದಿನ ಕೋರ್ಟಿನ ಆಜ್ಞೆಗೆ ವಿರುದ್ಧವಾಗಿ ನಡೆದದ್ದಕ್ಕೆ ವಡಗಲೆಯವರ ಮೇಲೆ ಮುನ್‌ಸೀಫರು ನೋಟೀಸ್ ಜಾರಿಮಾಡಿದರು. "ಹೈಕೋರ್ಟಿನ ತೀರ್ಪಿಗೆ ವ್ಯಾಖ್ಯಾನ ಬರೆಯುವಷ್ಟು ವ್ಯವಹಾರ ವ್ಯಾಕರಣ

ತಮಗೆ ಬರುವುದಿಲ್ಲವೆಂದು ನಾವು ವಿನಯಪೂರ್ವಕ ವಿಜ್ಞಾಪನೆ ಮಾಡಿ ಕೊಳ್ಳುತ್ತಿದೇವೆ" ಅಂದರು.

ಸರಿ! ಯಥಾಪ್ರಕಾರ ಡಿಸ್ಟ್ರಿಕ್ಟ್ ಕೋರ್ಟ್ ಹೈಕೋರ್ಟ್ ಸಾದಾ ಬೆಂಚು ಫುಲ್ ಬೆಂಚು ಇತ್ಯಾದಿ ನ್ಯಾಯಸ್ಥಾನಗಳನ್ನು ಎರಡು ಪಂಗಡ ದವರೂ ಹಾದು ಬಂದರು. ಮೈಲಾಪೂರಿಗೂ ತಮ್ಮ ಊರಿಗೂ ಓಡಾಡಿದರು. ಸುತ್ತ ಮೂರು ಜಿಲ್ಲೆಗಳಲ್ಲಿ ಚಂದಾ ಎತ್ತಿದರು. ಕಡೆಗೆ, ಹೈಕೋರ್ಟಿನ ಎಲ್ಲ ನ್ಯಾಯಾಧೀಶರೂ ಒಟ್ಟು ಸೇರಿ, ಆನೆಗೆ ತೆಂಗಲೆ ನಾಮವೇ ಸರಿ, ಎಂದು ತೀರ್ಪು ಕೊಟ್ಟರು. ಮುನ್‌ಸೀಫರ ವಾದಸರಣಿಯನ್ನೇ ಅವರೂ ಅನುಮೋದಿಸಿದರು.

ಈ ಸಾರಿ ಅನಂತಯ್ಯಂಗಾರರನ್ನು ತಡೆಯಲು ಯಾವ ವಡಗಲೆ ಪ್ಪೆಳ್ಳೆಯೂ ಮುಂದೆ ಬರಲಿಲ್ಲ. ಆನೆಗೂ ಮುಖ ಚಿಕ್ಕದಾಯಿತು. ವಡಗಲೆ ಯವರು ಈ ಸಲವೂ ಯಾವುದಾದರೂ ಒಂದು ಕುಯುಕ್ತಿ ಹುಡುಕಿ ತೆಂಗಲೆಯವರು ಹಣೆ ಚಚ್ಚಿಕೊಳ್ಳುವ ಹಾಗೆ ಮಾಡುವರೆಂದು ಅದು ತಿಳಿದು ಕೊಂಡಿತ್ತು. ಅದಕ್ಕಾಗಿ ಅದು ಓರೆಗಣ್ಣಿನಿಂದ ಸುತ್ತಲೂ ನೋಡಿತು. ವಡಗಲೆಯವರ ಸುಳಿವೇ ಇರಲಿಲ್ಲ.

ಸಂಜೆ. ಮುಸುಕು, ಮುಸುಕು. ಐದಾರು ವಡಗಲೆ ತರುಣರು ಮೆಲ್ಲಗೆ ಆನೆಯ ಹತ್ತಿರ ಬಂದು ಪಿಸುಗುಟ್ಟಿದರು. ತಾವು ಹೊಲಿದು ತಂದ ಒಂದು ರೇಷ್ಮೆ 'ವಡಗಲೆ' ನಾಮವನ್ನು ಆನೆಯ ಹಣೆಯ ಮೇಲೆ ಕಟ್ಟಿದರು. ತೆಂಗಲೆ ನಾಮ ಸಂಪೂರ್ಣ ಮುಚ್ಚಿಹೋಯಿತು. ಆನೆಗೆ ಪರಮಾನಂದ ವಾಯಿತು. ಬಂದ ಸಂತೋಷದಲ್ಲಿ ಬಟ್ಟೆಯ ನಾಮವನ್ನು ಬಿಗಿದ ವಡ ಗಲೆಯ ಬೆನ್ನು ತಟ್ಟಬೇಕೆಂದು ಆನೆಗೆ ಅನ್ನಿಸಿತು....ಆದರೆ, ಪುಣ್ಯಕ್ಕೆ ಆತ ಅಲ್ಲಿರಲಿಲ್ಲ.

ಕೃತ್ಯದ ಸುದ್ದಿಯನ್ನು ಕೇಳಿ ತೆಂಗಲೆಯವರು ಹಾಹಾಕಾರ ಮಾಡುತ್ತ ಓಡಿ ಬಂದರು. ಹೈಕೋರ್ಟ ಜಡ್ಜ್‌ಮೆಂಟಿನಲ್ಲಿ ತೆಂಗಲೆ ನಾಮವನ್ನು ಯಾವುದರಿಂದಲೂ ಮುಚ್ಚಕೂಡದೆಂದು ಬರೆದಿಲ್ಲವೆಂದೂ ತಾವು ಮಾಡಿದ್ದು ನ್ಯಾಯವಿರೋಧವಲ್ಲವೆಂದೂ ವಡಗಲೆಯವರು ಆನೆಯ ಮೇಲೆ ಕೂತು ಕೊಂಡೇ ವಾದಿಸಿದರು.

ಅಲ್ಲದೆ, ಮುನ್‌ಸೀಫರ ತೀರ್ಪಿನಲ್ಲಿ "ಆನೆಗೆ ತೆಂಗಲೆ ನಾಮವೇ ಸರಿ" ಎಂದು ಬರೆದದ್ದನ್ನು ಹೈಕೋರ್ಟಿನವರು "ಆನೆಯ ಹಣೆಯ ಮೇಲೆ ತೆಂಗಲೆ ನಾಮ ಬಳಿಯುತಕ್ಕದ್ದು" ಎಂದು ಹೇಳಿದರೇ ಹೊರತು, "ತೆಂಗಲೆ ನಾಮ ಕಾಣಿಸಬೇಕು" ಎಂದು ಹೇಳಿಲ್ಲವೆಂದರು.

ತೆಂಗಲೆಯುವರು ತಲೆ ತಗ್ಗಿಸಿಕೊಂಡು ಅಲ್ಲಲ್ಲಿ ನಿಂತು ಚರ್ಚಿಸಿದರು. ಮೈಲಾಪೂರಿಗೆ ಹೋದರು; ನಿಧಿ ಕೂಡಿಸಿದರು; ಪರದಾಡಿದರು. ಮತ್ತೆ ನಾಮದ ವಿಷಯ ಮೂರು ಕೋರ್ಟಿಗೂ ಹೋಯಿತು. ಕಡೆಗೆ ಹೈಕೋರ್ಟ ಜಡ್ಜರು, ಮೂಗಿನ ಮೇಲೆ ಬೆರಳಿಟ್ಟು, ಹಣೆಯ ಬೆವರೊರಿಸಿ, "ಆನೆಯ ಹಣೆಯ ಚರ್ಮದ ಮೇಲೆ ತೆಂಗಲೆ ನಾಮ ಹಾಕಬೇಕು, ಅದರ ಮೇಲೆ ಸದಾ ಜನರ ದೃಷ್ಟಿ ಬೀಳುವಂತಿರಬೇಕು. ಯಾವ ಮುಚ್ಚುಮರೆಯೂ ಇರ ಕೂಡದು" ಎಂದು ತಮ್ಮ ಹಿಂದಿನ ಆರ್ಡರನ್ನು ತಿಳಿಸಿ ಹೇಳಿದರು.

ಹೈಕೋರ್ಟಿನ ಈ ಹೊಸ ಡಿಕ್ರಿಯನ್ನು ಕೈಯ್ಯಲ್ಲಿ ಝಳಪಿಸುತ್ತಾ ನೂರಾರು ಸಾಲು ದೀಪ ಡೋಲು ವಾಲಗ ಸಹಿತ ಆನೆಯ ಹತ್ತಿರ ಬಂದ ತೆಂಗಲೆಯುವರನ್ನು ವಡಗಲೆಯುವರು ಪುನಃ ಅಡ್ಡಕಟ್ಟಿದರು. ಡಿಕ್ರಿಯಲ್ಲಿ ನಮೂದಿಸಿರುವ ಆನೆ ಅದಲ್ಲವೆಂದು ಹೇಳಿದರು.

ನಿಜ! ಎಂಟು ಹತ್ತು ವಾರಗಳ ಹಿಂದೆಯೇ, ೩೦, ೪೦ ವರ್ಷ ಗಳಿಂದಲೂ ದೇವರ ಸೇವೆ ಮಾಡಿದ ಆ ಆನೆ ವಡಗಲೆ ಸ್ವರ್ಗವನ್ನೈದಿತ್ತು. ಅದರ ಅನಂತರ ದೇವರ ಸೇವೆಗಾಗಿ ತಂದ ಆನೆಗೆ ಕೋರ್ಟಿನ ಆರ್ಡರು ಅನ್ವಯಿಸುವುದಿಲ್ಲ ಎಂದರು.

ಮೊನ್ನೆ ಮತ್ತೆ ಮೈಲಾಪೂರಿಗೆ ಮೂರು ಮಹಾ ತೆಂಗಲೆಯುರು ಒಂದು ಫೈಲಿ ಸಹಿತವಾಗಿ ಪ್ರಯಾಣ ಬೆಳೆಸಿರುವರಂತೆ.

ನೋಡಬೇಕು! ಈ ಆನೆಯ ಹಣೆಬರಹ ಹೇಗಿದೆಯೋ?

---

# ನಶೀಬುಳ್ಳ



(" ಕಾಗದಾಭಾವೆ ಪದ್ಯಂ ಗದ್ಯ ಇವ ಪ್ರಿಂಟಯೇತ್ " ಎಂಬು ದನ್ನನುಸರಿಸಿ )

ರಾಮಯ್ಯನೀಗೊಂದು ಬಿ. ಎಸ್ ಸಿ. ಆದರೂ ಜನಿಸಿದಾಗಲೆ ಕೂಸು! ಬಲು ಮುದ್ದು! ಕಾಲೊದ್ದ ತೊಟ್ಟಿಲೋ ಬರಿ ಬಿದಿರು; ಮಲಗಿ ಸಿದ ಚಾಪೆಯೂ ಬರಿ ಬಿದಿರು! ಬಡತನದ ಹಟ್ಟಿಯಲಿ ಅಂಬಲಿಯ ಕುಡಿ ಯುತ್ತ ಅಂಬೆ ಕಾಲನು ಇಕ್ಕಿ ತೊದಲ ನುಡಿ ನುಡಿಯುತ್ತ ತಂಗಳನೆ ಬೇಡಿ ದನು. ಬಿಸ್ಕತ್ತು, ಕರಿಕಡುಬು, ಜಾಮೂನು ಸವಿಯದೆಯೆ ಬೆಳೆದು ನಾಲ್ಕ ಡಿಯಾಗಿ ಶಾಲೆಗಳನೊಳನುಗ್ಗಿ ಹೊರಬಂದು ಫ್ರೀಷಿಪ್ ದೆಸೆಯಿಂದ ಈಸಿಪೀಯೆಸ್ಸೆನಿಸಿ ಕಾಲೇಜಿಗೂ ಹತ್ತಿ 'ಕಾಲಕ್ಷೇಪ'ವ ಗಳಿಸಿ ಬಿ. ಎಸ್. ಸಿ. ಆದನವ. ಠೀವಿಯಲಿ ಕರಿಗೌನು, ಜರಿಪೇಟ ಧರಿಸಿ ಅವ ಹುಡ್ಡಿಕ್ಕಿ ಹಲ್ಕಿರಿದು (ಈ) ಹೊತ್ತಿಗೆಯ ಹೊರಪುಟದ ಚಿತ್ರದಲಿ ಕುಣಿವಂತೆ ಕುಣಿದನಾ ರಾಮಯ್ಯ! ಮುದಿ ತಾಯ ಮನ ತಣಿಸಿ!

ಕಾನ್ವೊಕೇಷನದಿಂದ ಹೊರಬರುವ ಹೊತ್ತಿನಲಿ " ಇಕೊ! ನಿನಗೆ ಹುದ್ದೆ! ಕೊ! ಕೂಡು ಬಾ! ಮಾಡು ಬಾ! ಕರೆದವನ ಕರವನ್ನು ಕುಲು ಕುತ್ತ ಮಂತ್ರಿಗಳು ಚಾಕರಿಯ ಕೊಟ್ಟವನ ಬೆನ್ನ ತಟ್ಟುವರೆಂದು ಕನಸು ಕಾಣುತಲಿದ್ದ—ಸೋರುವಾ ಹಟ್ಟಿಯಲಿ ಸೇರಿದಾ ಶಾಲೆಯಲಿ ಕಾಲೇಜ ಬೆಂಚಿನಲಿ ಲಾಲ್‌ಬಾಗ ಹುಲ್ಲಿನಲಿ, ಸಂಪಂಗಿ ಏರಿಯಲಿ! ಎಲ್ಲ ಬರಿ ಕನ ಸಾಯ್ತು.

ಅವರಿವರನಾಶ್ರಯಿಸಿ ದೊಡ್ಡವರ ಹಿಂದಲೆದು ಅವರ ಹಾಸ್ಯಕ್ಕೆಲ್ಲ ತುಟಿ ತೆರೆದು ನಗೆ ಬೀರಿ ಸಾಕಾಯ್ತು; ಸುಸ್ತಾಯ್ತು. ಕಡೆಗೊಬ್ಬರಾರೇಯ (M.R.A.) ಸೋದರತ್ತೆಯ ಮಗಳ ಮದುವೆಯಾದರೂ ಕೂಡ ಚಾಕರಿಯು

ಸಿಗಲಿಲ್ಲ. ಆರ್. ಹಿ. ಆಫೀಸ[illegible]ಕಾರಕೂನನ ಹುದ್ದೆ ? ಮುಜ [illegible]ಯಿ ? ಪೋಲೀಸು? ಆಹಾರ ಸರಬರಾಯಿ? ಸಾರಾಯಿ ಗಾಂಜಾ? ನಾಸ್ತಿ ಎಂದರು ಎಲ್ಲ. ಸ್ಕಾಲರ್ಶಿಪ್ಪನು ಕೊಟ್ಟು ಓದೋದು ಎಂದವರು, ಮುದಿ ತಾಯಿ ಮನದಲ್ಲಿ ಗೋಪುರವನಟ್ಟವರು ನಾಸ್ತಿ ಎಂದರು ಎಲ್ಲ. ಕಡೆಗೊಬ್ಬ ಮಹನೀಯ, ಮಾಸ್ತರಾಗೆಂದನವ! ಕುರಿಕಾಯುವಾ ಕೆಲಸ!

ದುಗುಡದಲಿ ಮುಳುಮುಳುಗಿ ಅತ್ತನಾ ರಾಮಯ್ಯ! ಈ ಗತಿಗೆ ಬಂದಿತೆ ಹಾಳು ಬಾಳೆನ್ನುತ್ತ.

ಕಡೆಗೊಂದು ದಿನವವನು ಪೇಪರನು ತಿರುವುತ್ತ ಥಟ್ಟನೆಯೆ ಕಣ್ತೆರೆದ. ಬಡತನವ ಕಿತ್ತೊಗೆವ ಕಲ್ಪತರುವೊಂದನವ ಅಂದಿನಿಂ ಮನದಲ್ಲಿ ಬೆಳೆಸಿದನು. ಕಾರ್ಯರೂಪಕೆ ತರಲು ದಿನ ಹತ್ತು ಬೇಕಾಯ್ತು. "ನಶೀಬುಳ್ಳ" ನಾಮವನು ಧರಿಸಿದನು ಹೊರ ಜಗಕೆ. ನೂರಾರು ಪೇಪರಲಿ ಜಾಹಿರಾತನು ಕೊಟ್ಟ. "ಭೂತ ಸಂಚಾರವನು ನಿಲ್ಲಿಸಲು ದಾರಗಳು; ಪ್ರೇತಗಳು ಬಾರದಲೆ ಧರಿಸಿರೀ ದಾರಗಳ! ಚಿಲ್ಲರೆ ಅಭಾವದಲಿ ಬಲಗೈಯ ತರ್ಜನಿಗೆ ಬಂಧಿಸಿರಿ ದಾರಗಳ! ಇಂಟರನು ದಾಟುವೊಡೆ ಧರಿಸಿರೀ ದಾರಗಳ! ಹೆಣ್ಣನ್ನು ಒಲ್ಸಿಸುವೊಡೆ ಧರಿಸಿರೀ ದಾರಗಳ, ಯಣ್ಣೆಣ್ಣೆ ಪಡೆಯುವೊಡೆ ಕೊಳ್ಳಿರೀ ದಾರಗಳ"—ಎಂದಂದ ದಿನ ದಿನವು.

ದಾರದಿಂದಲೆ ಆವನು ಮಹಡಿ ಮನೆ ಕಟ್ಟಿಹನು! ದಾರದಿಂದಲೆ ಆವನೀಗ ಭಾರಿ ಶ್ರೀಮಂತನು. ಈಗವನು ತನ್ನ ಮನೆ ಹೈಕಳಿಗೆ ಪಾಠ ಹೇಳಲು ಬರುವ ಮಾಸ್ತರಿಗೆ ತಿಂಗಳಿಗೆ ಅರವತ್ತು ರೂಪಾಯಿ ತೆರುತಿಹನು ನಗುಮೊಗದಿ.

"ರಾಮಯ್ಯ ಬಿ. ಎಸ್. ಸಿ." ಅಲ್ಲ ಅವ! "ನಶೀಬುಳ್ಳ".



# ಲಲಿತ ಸಾಹಿತ್ಯ ಮಾಲೆ
# ಧಾರವಾಡ

ಆರು ನೂರು ಪುಟದ ಸಾಹಿತ್ಯ — ಚಂದಾ: ಸಾದಾ ಅಂಚೆ ೫—೦—
ರಜಿಸ್ಟರದಿಂದ ೬—೦—

## ಇದುವರೆಗಿನ ಪ್ರಕಟನೆಗಳು

| | | | |
|---|---|---|---|
| ೧. | ಚಿಗುರು | ದಿ| ಸೌ. ಗೌರಮ್ಮ | ಪುನರ್ಮುದ್ರಣ ನಡೆದಿದೆ |
| ೨. | ಅಕ್ಕಾಜಿ | ಶರಚ್ಚಂದ್ರ | ,, |
| ೩. | ಕುಲದೀಪಕರು | ಸಿದ್ದವನಹಳ್ಳಿ | ,, |
| ೪,೫,೬. | ಸಾಹಿತ್ಯ ರತ್ನ | ಅ. ನ. ಕೃ. | ೩—೮—೦ |
| ೭. | ಮುದ್ದಿನ ಕಣಿ ( ಚೆಕೊವ್ ) | ಚುಳಕಿ | ೧—೦—೦ |
| ೮. | ಸುಮತಿ ಮತ್ತು ಅನುರಾಧಾ | ಶರಚ್ಚಂದ್ರ | ೧—೪—೧ |
| ೯. | ಡೊಂಕುಬಾಲ | ನಾ. ಕಸ್ತೂರಿ | ೧—೮—೦ |
| ೧೦. | ಕಸ್ತೂರಿ | ಶ್ರೀಮತಿ 'ವಾಣಿ' | ೧—೪—೦ |
| ೧೧. | ಶೈಲಾಜಿ | ವಿವಿಧ ಏಕಾಂಕಗಳು | ಅಚ್ಚಿನಲ್ಲಿ |
| ೧೨. | ಇಂದಿನ ಕರ್ನಾಟಕ | ಸಂಪಾದಕರು: ಶ್ರೀ. ವಿ. ಕೃ. ಗೋಕಾಕ, ಬಿ. ಎ. (ಆಕ್ಸಫರ್ಡ) | ,, |

## ಸಿಗುವ ಸ್ಥಳಗಳು:

೧. ಮನೋಹರ ಗ್ರಂಥ ಭಾಂಡಾರ, ಧಾರವಾಡ.
೨. ಕನ್ನಡ ಪುಸ್ತಕಾಲಯ, ಬೆಳಗಾವಿ.